KA / BG-GPO/2515/WPP-47/2006-2008



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೧ | ಬೆಂಗಳೂರು, ಗುರುವಾರ, ಏಪ್ರಿಲ್ ೬, ೨೦೦೬ (ಚೈತ್ರ ೧೬, ಶಕ ವರ್ಷ ೧೯೨೮) | ಸಂಚಿಕೆ ೧೪ |
|---|---|---|

## ಭಾಗ - ೧

## ರಾಜ್ಯ ಸರ್ಕಾರದ ಮುಖ್ಯ ಆದೇಶಗಳು ಹಾಗೂ ಸುತ್ತೋಲೆ ಮುಂತಾಗಿ ಎಲ್ಲಾ ಇಲಾಖೆಗಳಿಗೂ ಸಂಬಂಧಿಸಿದ ಆದೇಶಗಳು

### ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯಃ** ಕರ್ನಾಟಕ ಸರ್ಕಾರ ಸಚಿವಾಲಯದ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ–ಐಆರ್‌ಎಲ್‌ಎ)ಯ ತಾತ್ಕಾಲಿಕ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆಃ**
1 ಸರ್ಕಾರದ ಆದೇಶ ಸಂಖ್ಯೆಃ ಡಿಪಿಎಆರ್ 11 ಎಸ್‌ಜಿಬಿ 2000 ದಿನಾಂಕಃ 14.3.2000.
2 ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 11 ಸಅಸೇ 2000 ದಿನಾಂಕಃ 29.7.2000.
3 ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 7 ಸಸಿವಿ 2001 ದಿನಾಂಕಃ 20.3.2001.
4 ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 19 ಸಸಿವಿ 2002 ದಿನಾಂಕಃ 6.4.2002.
5 ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 244 ಸಅಸೇ 2001 ದಿನಾಂಕಃ 23.4.2002.
6 ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 244 ಸಅಸೇ 2001 ದಿನಾಂಕಃ 12.8.2002.
7 ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 244 ಸಅಸೇ 2001 ದಿನಾಂಕಃ 31.10.2002.
8 ಸರ್ಕಾರದ ಆದೇಶ ಸಂಖ್ಯೆ: ಸಿಆಸುಇ 24 ಸಸಿವಿ 2005 ದಿನಾಂಕ: 21.4.2005.
9 ಅ.ಟಿ.ಸಂಖ್ಯೆ: ಸಿಆಸುಇ 267 ಲೆಪ ಐಆರ್‌ಎಲ್‌ಎ 2006 ದಿನಾಂಕ: 1.2.2006.

**ಪ್ರಸ್ತಾವನೆಃ**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ದಿನಾಂಕ: 14.3.2000ರ ಸರ್ಕಾರಿ ಆದೇಶದಲ್ಲಿ ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಭಾರತೀಯ ಆಡಳಿತ ಸೇವಾ ಅಧಿಕಾರಿಗಳು, ಕರ್ನಾಟಕ ಆಡಳಿತ ಸೇವಾ ಅಧಿಕಾರಿಗಳು ಹಾಗೂ ನಿಯೋಜನೆ ಮೇಲೆ ಕಾರ್ಯ ನಿರ್ವಹಿಸುತ್ತಿರುವ ಅಧಿಕಾರಿಗಳ ವೇತನ ಪಾವತಿ ಹಾಗೂ ಇತರೆ ವ್ಯಕ್ತಿಗತ ಕ್ಲೇಮ್‌ಗಳ ಪರಿಶೀಲನೆ ಪಾವತಿ ಸಲುವಾಗಿ ಈ ಕೆಳಕಂಡ ಅಧಿಕಾರಿ : ಸಿಬ್ಬಂದಿಗಳನ್ನು ಒಳಗೊಂಡಂತೆ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ–ಐಆರ್‌ಎಲ್‌ಎ) ಶಾಖೆಯನ್ನು ಒಂದು ವರ್ಷದ ಅವಧಿಗೆ ಸೃಜಿಸಲಾಗಿದ್ದಿತು.

| | | |
|---|---|---|
| ಅ. | ಸರ್ಕಾರದ ಅಧೀನ ಕಾರ್ಯದರ್ಶಿ | 1 |
| ಆ. | ಶಾಖಾಧಿಕಾರಿ | 1 |
| ಇ. | ಅಕೌಂಟ್ಸ್ ಅಸಿಸ್ಟೆಂಟ್ | 1 |
| ಈ. | ಸಹಾಯಕ | 2 |
| ಉ. | ಕಿರಿಯ ಸಹಾಯಕ | 1 |
| ಊ. | ಶೀಘ್ರಲಿಪಿಗಾರರು | 1 |
| ಋ. | ಕ್ಯಾಷಿಯರ್ | 1 |
| ಋ | ತಾಂತ್ರಿಕ ಸಹಾಯಕರು (ವೇತನ ಶ್ರೇಣಿ ರಹಿತ ಹುದ್ದೆ) | 1 |
| ಎ. | ದಲಾಯತ್ | 1 |

ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 29.7.2000ದ ಸರ್ಕಾರದ ಆದೇಶದಲ್ಲಿ ಅಕೌಂಟ್ಸ್ ಅಸಿಸ್ಟೆಂಟ್‌ಗಳ ಹುದ್ದೆಯನ್ನು ಅಕೌಂಟ್ಸ್ ಸೂಪರಿಂಟೆಂಡೆಂಟ್ ಹುದ್ದೆಗೆ ಉನ್ನತೀಕರಿಸಲಾಗಿದೆ. ಹಾಗೂ ಎರಡು ಸಹಾಯಕರ ಹುದ್ದೆಗಳ ಪೈಕಿ ಒಂದು ಹುದ್ದೆಯನ್ನು ಹಿರಿಯ ಸಹಾಯಕ ಹುದ್ದೆಗೆ ಉನ್ನತೀಕರಿಸಲಾಗಿದೆ. ಕ್ರಮ ಸಂಖ್ಯೆ (3) ಮತ್ತು (4)ರಲ್ಲಿ ಓದಲಾದ ಸರ್ಕಾರಿ ಆದೇಶಗಳಲ್ಲಿ ಹುದ್ದೆಗಳನ್ನು ದಿನಾಂಕಃ 13.3.2003 ರವರೆಗೆ ವಿಸ್ತರಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾದ ದಿನಾಂಕ: 23.4.2002ರ ಸರ್ಕಾರದ ಆದೇಶದಲ್ಲಿ ಈ ಕೆಳಕಂಡ ಅಧಿಕ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ.

| | | |
|---|---|---|
| ಅ. | ಡಾಟಾ ಎಂಟ್ರಿ ಆಪರೇಟರ್ | 1 |
| ಆ. | ಸಹಾಯಕ | 1 |
| ಇ. | ಬೆರಳಚ್ಚುಗಾರ | 1 |

ಮೇಲೆ ಕ್ರಮ ಸಂಖ್ಯೆ (6)ರಲ್ಲಿ ಓದಲಾದ ದಿನಾಂಕ: 12.8.2002ರ ಸರ್ಕಾರದ ಆದೇಶದಲ್ಲಿ ಒಂದು ಸಹಾಯಕ ಹಾಗೂ ಒಂದು ದಲಾಯತ್ ಹುದ್ದೆಗಳನ್ನು ಸೃಜಿಸಲಾಗಿರುತ್ತದೆ. ಅಲ್ಲದೆ ಕ್ರಮ ಸಂಖ್ಯೆ (7) ರಲ್ಲಿ ಓದಲಾದ ದಿನಾಂಕ: 30.10.2002ರ ಸರ್ಕಾರಿ ಆದೇಶದಲ್ಲಿ ಒಂದು ವೇತನ ಶ್ರೇಣಿ ರಹಿತ ತಾಂತ್ರಿಕ ಸಹಾಯಕರ ಹುದ್ದೆಯನ್ನು ವೇತನ ಶ್ರೇಣಿ ರಹಿತ ವಿಶೇಷಾಧಿಕಾರಿ ಹುದ್ದೆ ಎಂದು ಮರು ಪದನಾಮೀಕರಿಸಲಾಗಿರುತ್ತದೆ.

ಪ್ರಸ್ತುತ ಸರ್ಕಾರದ ಅಧೀನ ಕಾರ್ಯದರ್ಶಿ ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಲೆಕ್ಕಪತ್ರ-ಐಆರ್‌ಎಲ್‌ಎ) ಇವರು ಮೇಲೆ ಕ್ರಮ ಸಂಖ್ಯೆ (9) ರಲ್ಲಿ ಓದಲಾದ ದಿನಾಂಕ: 1.2.2006ರ ಅನಧಿಕೃತ ಟಿಪ್ಪಣಿಯಲ್ಲಿ ಐ.ಆರ್.ಎಲ್.ಎ ಶಾಖೆಯ ಹುದ್ದೆಗಳನ್ನು ದಿನಾಂಕ: 14.3.2006 ರಿಂದ ಒಂದು ವರ್ಷದ ಅವಧಿಗೆ ಮುಂದುವರೆಸಲು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಿ, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆಃ ಸಿಆಸುಇ 13 ಸಸಿವಿ 2006, ಬೆಂಗಳೂರು, ದಿನಾಂಕಃ 15ನೇ ಫೆಬ್ರವರಿ 2006**

ಕರ್ನಾಟಕ ಸರ್ಕಾರ ಸಚಿವಾಲಯದ, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ (ಲೆಕ್ಕಪತ್ರ-ಐಆರ್‌ಎಲ್‌ಎ) ಶಾಖೆಯ ಈ ಕೆಳಕಂಡ ಹುದ್ದೆಗಳನ್ನು ದಿನಾಂಕಃ 14.3.2006 ರಿಂದ ಒಂದು ವರ್ಷದ ಅವಧಿಗೆ ತಾತ್ಕಾಲಿಕವಾಗಿ ಮುಂದುವರೆಸಲಾಗಿದೆ.

| | | |
|---|---|---|
| 1. | ಸರ್ಕಾರದ ಅಧೀನ ಕಾರ್ಯದರ್ಶಿ | 1 |
| 2. | ಶಾಖಾಧಿಕಾರಿ | 1 |
| 3. | ತಾಂತ್ರಿಕ ಸಹಾಯಕರು : ವಿಶೇಷಾಧಿಕಾರಿ (ವೇ.ಶ್ರೇ.ರ) | 1 |
| 4. | ಹಿರಿಯ ಸಹಾಯಕರು | 1 |
| 5. | ಸಹಾಯಕರು | 3 |
| 6. | ಕಿರಿಯ ಸಹಾಯಕರು | 1 |
| 7. | ಶೀಘ್ರಲಿಪಿಗಾರರು | 1 |
| 8. | ಕ್ಯಾಷಿಯರ್ | 1 |
| 9. | ಅಕೌಂಟ್ಸ್ ಸೂಪರಿಂಟೆಂಡೆಂಟ್ | 1 |
| 10. | ಡಾಟಾ ಎಂಟ್ರಿ ಆಪರೇಟರ್ | 1 |
| 11. | ಬೆರಳಚ್ಚುಗಾರರು | 1 |
| 12. | ದಲಾಯತ್ (ದಲಾಯತ್-1 + ಆಫೀಸ್ ಆರ್ಡರ್ಲಿ-1) | 2 |
| | **ಒಟ್ಟು** | **15** |

ಸದರಿ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆಃ ಆಇ 1 ಟಿಎಫ್‌ಪಿ 96, ದಿನಾಂಕಃ 10.7.96 ರಲ್ಲಿ ಸಹಮತಿ ನೀಡಿರುವುದೆಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 282

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಆಸುಇ (ಸೇವೆಗಳು-2).

**ವಿಷಯಃ** ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ, ವಾರ್ತಾ ಪ್ರವಾಸೋದ್ಯಮ ಮತ್ತು ಯುವಜನ ಸೇವೆ ಹಾಗೂ ಕಂದಾಯ, ಒಳಾಡಳಿತ ಮತ್ತು ಸಾರಿಗೆ, ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆಗಳಲ್ಲಿನ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆ ಹಾಗೂ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆಃ**
1 ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 4 ಸಸಿವಿ 92, ದಿನಾಂಕ: 13.8.92.
2 ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 275 ಸಅಸೇ 93 ದಿನಾಂಕ: 27.9.1993.
3 ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 61 ಆಹಿಸೇ 99 ದಿನಾಂಕ: 20.10.1999.
4 ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 22 ಸಸಿವಿ 2005, ದಿನಾಂಕ: 19.4.2005.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ಕರ್ನಾಟಕ ಸರ್ಕಾರದ ಸಚಿವಾಲಯದ ಕೆಳಕಂಡ ಇಲಾಖೆಗಳಲ್ಲಿ ಆಂತರಿಕ ಆರ್ಥಿಕ ಸಲಹೆಗಾರರ ಶಾಖೆಗಳನ್ನು 2 ವರ್ಷಗಳ ಅವಧಿಗೆ ಮಂಜೂರು ಮಾಡಲಾಗಿರುತ್ತದೆ.

1. ಪಶುಸಂಗೋಪನೆ ಮೀನುಗಾರಿಕೆ ಮತ್ತು ಅರಣ್ಯ ಇಲಾಖೆ.
2. ವಾರ್ತಾ ಪ್ರವಾಸೋದ್ಯಮ ಯುವಜನ ಸೇವಾ ಹಾಗೂ ಕಂದಾಯ ಇಲಾಖೆ.
3. ಆಹಾರ ಮತ್ತು ಸಾರಿಗೆ ಹಾಗೂ ಸಹಕಾರ ಇಲಾಖೆ.
4. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಹಾಗೂ ಮೇಲ್ಕಂಡ ಇಲಾಖೆಗಳ ಆಂತರಿಕ ಆರ್ಥಿಕ ಸಲಹೆಗಾರರ ಶಾಖೆಗಳಿಗೆ ಈ ಕೆಳಕಂಡಂತೆ ಪೂರಕ ಸಿಬ್ಬಂದಿ ಹುದ್ದೆಗಳನ್ನು ಮಂಜೂರು ಮಾಡಲಾಗಿರುತ್ತದೆ.

| ಕ್ರಮ ಸಂಖ್ಯೆ | ಹುದ್ದೆ | ಒಂದು ಆಂತರಿಕ ಆರ್ಥಿಕ ವಿಭಾಗಕ್ಕೆ ಹುದ್ದೆಗಳ ಸಂಖ್ಯೆ | ನಾಲ್ಕು ಆಂತರಿಕ ಆರ್ಥಿಕ ವಿಭಾಗಳಿಗೆ ಮಂಜೂರಾದ ಹುದ್ದೆಗಳ ಸಂಖ್ಯೆ |
|---|---|---|---|
| 1. | ಆಂತರಿಕ ಆರ್ಥಿಕ ಸಲಹೆಗಾರರು | 01 | 04 |
| | **ಆಂತರಿಕ ಆರ್ಥಿಕ ಶಾಖೆ** | | |
| 2. | ಶಾಖಾಧಿಕಾರಿ | 01 | 04 |
| 3. | ಹಿರಿಯ ಸಹಾಯಕ | 01 | 04 |
| 4. | ಸಹಾಯಕ | 02 | 08 |
| 5. | ಶೀಘ್ರಲಿಪಿಗಾರ | 01 | 04 |
| 6. | ಬೆರಳಚ್ಚುಗಾರ | 01 | 04 |
| 7. | ಕಿರಿಯ ಸಹಾಯಕ | 01 | 04 |
| 8. | ದಲಾಯತ್ | 01 | 04 |
| | **ಆಯವ್ಯಯ ಮತ್ತು ಲೆಕ್ಕಪತ್ರ ಶಾಖೆ** | | |
| 9. | ಶಾಖಾಧಿಕಾರಿ | 01 | 04 |
| 10. | ಹಿರಿಯ ಸಹಾಯಕ | 02 | 08 |
| 11. | ಸಹಾಯಕ | 01 | 04 |
| 12. | ಕಿರಿಯ ಸಹಾಯಕ | 01 | 04 |
| 13. | ಬೆರಳಚ್ಚುಗಾರ | 01 | 04 |
| 14. | ದಲಾಯತ್ | 01 | 04 |
| | **ಒಟ್ಟು** | **16** | **64** |

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಪಶುಸಂಗೋಪನೆ ಮೀನುಗಾರಿಕೆ ಮತ್ತು ಅರಣ್ಯ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆಯನ್ನು ಅರಣ್ಯ, ಪರಿಸರ ಮತ್ತು ಜೀವಿ ಶಾಸ್ತ್ರ ಇಲಾಖೆಗೆ ಹಾಗೂ ಆಹಾರ ಸಾರಿಗೆ ಸಹಕಾರ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆಯನ್ನು ಒಳಾಡಳಿತ ಮತ್ತು ಸಾರಿಗೆ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆ ಎಂದು ಮರು ಪದನಾಮೀಕರಿಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (3) ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ಆಂತರಿಕ ಆರ್ಥಿಕ ಸಲಹೆಗಾರರ ಶಾಖೆಗಳ ಇಲಾಖೆಯ ಕಿರಿಯ ಸಹಾಯಕರ ಹುದ್ದೆಗಳನ್ನು ರದ್ದುಪಡಿಸಲಾಗಿದೆ. ಪ್ರಸ್ತುತ ಈ ಹುದ್ದೆಗಳನ್ನು ದಿನಾಂಕ: 1.1.2006 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 4 ಸಸಿವಿ 2006, ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2006**

ಕರ್ನಾಟಕ ಸರ್ಕಾರ ಸಚಿವಾಲಯದಲ್ಲಿನ ಈ ಕೆಳಕಂಡ ಆಂತರಿಕ ಆರ್ಥಿಕ ಸಲಹೆಗಾರರ ಹುದ್ದೆಗಳನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.1.2006 ರಿಂದ ಎರಡು ವರ್ಷದವರೆಗೆ ತಾತ್ಕಾಲಿಕವಾಗಿ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

1. ಅರಣ್ಯ, ಪರಿಸರ ಮತ್ತು ಜೀವಿ ಪರಿಸ್ಥಿತಿ ಶಾಸ್ತ್ರ ಇಲಾಖೆ.
2. ವಾರ್ತಾ ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಹಾಗೂ ಕಂದಾಯ ಇಲಾಖೆ.
3. ಒಳಾಡಳಿತ ಮತ್ತು ಸಾರಿಗೆ ಇಲಾಖೆ.
4. ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

| ಕ್ರಮ ಸಂಖ್ಯೆ | ಹುದ್ದೆ | ಒಂದು ಆಂತರಿಕ ಆರ್ಥಿಕ ವಿಭಾಗಕ್ಕೆ ಹುದ್ದೆಗಳ ಸಂಖ್ಯೆ | ನಾಲ್ಕು ಆಂತರಿಕ ಆರ್ಥಿಕ ವಿಭಾಗಳಿಗೆ ಮಂಜೂರಾದ ಹುದ್ದೆಗಳ ಸಂಖ್ಯೆ |
|---|---|---|---|
| 1. | ಆಂತರಿಕ ಆರ್ಥಿಕ ಸಲಹೆಗಾರರು | 01 | 04 |
| | **ಆಂತರಿಕ ಆರ್ಥಿಕ ಶಾಖೆ** | | |
| 2. | ಶಾಖಾಧಿಕಾರಿ | 01 | 04 |
| 3. | ಹಿರಿಯ ಸಹಾಯಕ | 01 | 04 |
| 4. | ಸಹಾಯಕ | 02 | 08 |
| 5. | ಶೀಘ್ರಲಿಪಿಗಾರ | 01 | 04 |
| 6. | ಬೆರಳಚ್ಚುಗಾರ | 01 | 04 |
| 7. | ಕಿರಿಯ ಸಹಾಯಕ | 01 | 04 |
| 8. | ದಲಾಯತ್ | 01 | 04 |

| ಕ್ರಮ ಸಂಖ್ಯೆ | ಹುದ್ದೆ | ಒಂದು ಆಂತರಿಕ ಆರ್ಥಿಕ ವಿಭಾಗಕ್ಕೆ ಹುದ್ದೆಗಳ ಸಂಖ್ಯೆ | ನಾಲ್ಕು ಆಂತರಿಕ ಆರ್ಥಿಕ ವಿಭಾಗಳಿಗೆ ಮಂಜೂರಾದ ಹುದ್ದೆಗಳ ಸಂಖ್ಯೆ |
|---|---|---|---|
| | **ಆಯವ್ಯಯ ಮತ್ತು ಲೆಕ್ಕಪತ್ರ ಶಾಖೆ** | | |
| 9. | ಶಾಖಾಧಿಕಾರಿ | 01 | 04 |
| 10. | ಹಿರಿಯ ಸಹಾಯಕ | 02 | 08 |
| 11. | ಸಹಾಯಕ | 01 | 04 |
| 12. | ಬೆರಳಚ್ಚುಗಾರ | 01 | 04 |
| 13. | ದಲಾಯತ್ | 01 | 04 |
| | **ಒಟ್ಟು** | **15** | **60** |

ಸದರಿ ಸರ್ಕಾರದ ಆದೇಶವನ್ನು ದಿನಾಂಕಃ 10.7.1996ರ ಆದೇಶ ಸಂಖ್ಯೆಃ ಎಫ್‌ಡಿ 1 ಟಿಎಫ್‌ಪಿ 96 ರನ್ವಯ ಆರ್ಥಿಕ ಇಲಾಖೆಯ ಸಹಮತಿಯನ್ನು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 283

**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಆಸುಇ (ಸೇವೆಗಳು–2).

**ವಿಷಯಃ** ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ಮುಂದುವರೆಸುವ ಬಗ್ಗೆ.

**ಓದಲಾಗಿದೆಃ** 1 ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 17 ಸಸಿವಿ 97 (ಭಾಗ) ದಿನಾಂಕ: 17.4.1998.
2 ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 37 ಸಸಿವಿ 2005 ದಿನಾಂಕ: 20.6.2005.
3 ಕಡತ ಸಂಖ್ಯೆ: ಹೆಚ್‌ಎಫ್‌ಡಬ್ಲ್ಯೂ 50 ಎಂಎಸ್‌ಎಫ್ 2006.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 12.3.1998 ರಿಂದ ಜಾರಿಗೆ ಬರುವಂತೆ ಒಂದು ವರ್ಷದ ಅವಧಿಗೆ ಸೃಜಿಸಲಾಗಿದ್ದಿತು.

| | | |
|---|---|---|
| 1. | ಹಿರಿಯ ಸಹಾಯಕ : ಬಾಷಾಂತರಕಾರ | 1 ಹುದ್ದೆ |
| 2. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3. | ಕಿರಿಯ ಸಹಾಯಕ | 1 ಹುದ್ದೆ |
| 4. | ದಲಾಯತ್ | 2 ಹುದ್ದೆಗಳು |
| 5. | ವಾಹನ ಚಾಲಕ | 1 ಹುದ್ದೆ |

ನಂತರ ಈ ಹುದ್ದೆಗಳನ್ನು ಕಾಲಕಾಲಕ್ಕೆ ವಿಸ್ತರಿಸಿಕೊಂಡು ಬರಲಾಗಿದ್ದು, ಅಂತಿಮವಾಗಿ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ: 20.6.2005ರ ಸರ್ಕಾರದ ಆದೇಶದನ್ವಯ ವಿಸ್ತರಿಸಲಾದ ಅವಧಿಯು ದಿನಾಂಕ: 31.3.2006ಕ್ಕೆ ಮುಕ್ತಾಯಗೊಂಡಿರುತ್ತದೆ. ಆದುದರಿಂದ ಈ ಹುದ್ದೆಯನ್ನು ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2006 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 5 ಸಸಿವಿ 2006, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ವೈದ್ಯಕೀಯ ಶಿಕ್ಷಣ) ಹುದ್ದೆಯನ್ನು ಈ ಕೆಳಕಂಡ ಪೂರಕ ಸಿಬ್ಬಂದಿ ಹುದ್ದೆಗಳೊಂದಿಗೆ ದಿನಾಂಕ: 1.4.2006 ರಿಂದ 31.3.2007 ರವರೆಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿದೆ.

| | | |
|---|---|---|
| 1. | ಹಿರಿಯ ಸಹಾಯಕ : ಬಾಷಾಂತರಕಾರ | 1 ಹುದ್ದೆ |
| 2. | ಶೀಘ್ರಲಿಪಿಗಾರರು | 2 ಹುದ್ದೆಗಳು |
| 3. | ಕಿರಿಯ ಸಹಾಯಕ | 1 ಹುದ್ದೆ |
| 4. | ದಲಾಯತ್ | 2 ಹುದ್ದೆಗಳು |
| 5. | ವಾಹನ ಚಾಲಕ | 1 ಹುದ್ದೆ |

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಂಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 288

**ಯು.ಪಿ. ಪ್ರಭು**
ಸರ್ಕಾರದ ಅಧಿನ ಕಾರ್ಯದರ್ಶಿ,
ಸಿಆಸುಇ(ಸೇವೆಗಳು–2).

**ವಿಷಯಃ** ವಾರ್ತಾ, ಪ್ರವಾಸೋದ್ಯಮ ಮತ್ತು ಯುವಜನ ಸೇವಾ ಇಲಾಖೆಯಲ್ಲಿನ ಸಚಿವಾಲಯ ಮಟ್ಟದಲ್ಲಿ ಎನ್.ಎಸ್.ಎಸ್.ಸಂಘಟನಾ ಕೋಶಕ್ಕೆ ಹೆಚ್ಚುವರಿ ಹುದ್ದೆಗಳನ್ನು ಸೃಜಿಸುವ ಬಗ್ಗೆ.

**ಓದಲಾಗಿದೆಃ** 1 ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 263 ಸಅಸೇ 96, ದಿ: 16.5.97.

2 ಕಡತ ಸಂಖ್ಯೆ: ಐಟಿವೈ 17 ಎನ್‌ಎಸ್‌ಎಸ್ 2001.

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1)ರಲ್ಲಿ ಓದಲಾಗಿರುವ ಸರ್ಕಾರದ ಆದೇಶದಲ್ಲಿ ರಾಜ್ಯ ಮಟ್ಟದಲ್ಲಿ ರಾಷ್ಟ್ರೀಯ ಸೇವಾ ಯೋಜನೆಯ (ಎನ್.ಎಸ್.ಎಸ್) ಕಾರ್ಯಗಳನ್ನು ಪರಿಣಾಮಕಾರಿಯಾಗಿ ಸಮನ್ವಯ ಮಾಡಲು ಅನುಕೂಲವಾಗುವಂತೆ ಎನ್.ಎಸ್.ಎಸ್.ಕೋಶವನ್ನು ಸೃಜಿಸಲಾಗಿದೆ.

ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾಗಿರುವ ಕಡತದಲ್ಲಿ ಪ್ರಸ್ತುತ ಎನ್.ಎಸ್.ಎಸ್.ಕೋಶದ ಹುದ್ದೆಗಳ ಜೊತೆಗೆ ಒಂದು ಸಹಾಯಕ ಮತ್ತು ಒಂದು ಬೆರಳಚ್ಚುಗಾರರ ಹುದ್ದೆಯನ್ನು ಸೃಜಿಸಲು ಪ್ರಸ್ತಾವನೆ ಇದೆ.

ಪ್ರಸ್ತಾವನೆಯನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 72 ಸಸೆವಿ 2005, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2006.**

ರಾಜ್ಯ ಮಟ್ಟದಲ್ಲಿ ರಾಷ್ಟ್ರೀಯ ಸೇವಾ ಯೋಜನೆಯ ಕಾರ್ಯಗಳನ್ನು ಸಮನ್ವಯ ಮಾಡುವ ಸಲುವಾಗಿ ಈಗಾಗಲೆ ಮಂಜೂರು ಮಾಡಿರುವ ಹುದ್ದೆಗಳನ್ನು ಹೊರತುಪಡಿಸಿ ಇನ್ನೆರಡು ಹುದ್ದೆಗಳನ್ನು (ಒಂದು ಸಹಾಯಕರ ಹುದ್ದೆ ಮತ್ತು ಒಂದು ಬೆರಳಚ್ಚುಗಾರರ ಹುದ್ದೆ) ಎನ್.ಎಸ್.ಎಸ್. ಸಂಘಟನಾ ಕೋಶದಲ್ಲಿ ಸರ್ಕಾರಿ ಆದೇಶ ಸಂಖ್ಯೆ: ಸಿಆಸುಇ 263 ಸಅಸೇ 96, ದಿನಾಂಕ: 16.5.97 ರಲ್ಲಿನ ಷರತ್ತುಗಳನ್ವಯ ಸೃಜಿಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಅನಧಿಕೃತ ಟಿಪ್ಪಣಿ ಸಂಖ್ಯೆ: ಆಇ 2374 ವೆಚ್ಚ–5/2005, ದಿನಾಂಕ: 28.1.2006 ರಲ್ಲಿ ಆರ್ಥಿಕ ಇಲಾಖೆಯು ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 289

**ಯು.ಪಿ. ಪ್ರಭು**

ಸರ್ಕಾರದ ಅಧೀನ ಕಾರ್ಯದರ್ಶಿ, ಸಿಅಸುಇ (ಸೇವೆಗಳು–2).

## ಒಳಾಡಳಿತ ಸಚಿವಾಲಯ

**ವಿಷಯ:** ಶ್ರೀ ಶಿವಶರಣಪ್ಪ, ಪಿಸಿ 354, ಗುಲ್ಬರ್ಗಾ ಜಿಲ್ಲೆ, ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**

1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ ಇವರ ಆದೇಶ ಸಂಖ್ಯೆ: 11/ಡಿಇ/2002 ಓಬಿ ಸಂಖ್ಯೆ:1631 /2004. ದಿನಾಂಕ:14-09-2004.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಪೊಲೀಸ್ ಮಹಾ ನಿರೀಕ್ಷಕರು, ಈಶಾನ್ಯ ವಲಯ ಗುಲ್ಬರ್ಗಾ, ಇವರ ಆದೇಶ ಸಂಖ್ಯೆ:ಅಪೀಲು /82/ಈವ/2004. ಅಪು ಸಂಖ್ಯೆ:109/ಈವ/2005. ದಿನಾಂಕ: 02.03.2005.
3. ಅರ್ಜಿದಾರರ ಪರೀಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:14-07-2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ:ಅಪೀಲು/ 2/92/2005, ದಿನಾಂಕ:06-12-2005.

**ಪ್ರಸ್ತಾವನೆ:**

ಶ್ರೀ ಶಿವಶರಣಪ್ಪ, ಪಿಸಿ-354 ಗುಲ್ಬರ್ಗಾ ಜಿಲ್ಲೆ, ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಿಯಮಗಳು) ನಿಯಮಾವಳಿ 1965ರ ನಿಯಮ 6 ಮತ್ತು 8 ರಡಿ ಜಂಟಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

"ವಿಚಾರಣಾಧೀನ ಖೈದಿ ಸಂಖ್ಯೆ:16391 ಸಿತ್ಯಾ ಉರ್ಫ್ ಶ್ರೀನಿವಾಸ, ತಂದೆ ಶಂಕರರಾವ್ ಕೇಂದ್ರ ಕಾರಾಗೃಹ ಗುಲ್ಬರ್ಗಾ, ಈತನನ್ನು ಸೇಡಂ ನ್ಯಾಯಾಲಯಕ್ಕೆ CC ನಂ.437/01ರಲ್ಲಿ ದಿನಾಂಕ:23-04-2002ರಂದು ವಿಚಾರಣೆ ಕುರಿತು ಹಾಜರುಪಡಿಸಲು ನಿಮ್ಮ ಬೆಂಗಾವಲಿನಲ್ಲಿ ಕಳುಹಿಸಿದಾಗ, ನೀವು ಸೇಡಂ ಕೋರ್ಟಿಗೆ ವಿಚಾರಣಾ ಖೈದಿ ಸೀತ್ಯಾ ಉರ್ಫ್ ಶ್ರೀನಿವಾಸನೊಂದಿಗೆ ಬಂದಾಗ;

1. ನೀವು ಕೋರ್ಟಿನಾವರಣದಲ್ಲಿ ವಿಚಾರಣಾ ಖೈದಿಗೆ ಆತನ ಸಂಬಂಧಿಕರನ್ನು ಮಾತನಾಡಲು ಬಿಟ್ಟು ಚಹಾ ಕುಡಿಯಲು ಹೋದಾಗ ವಿಚಾರಣಾ ಖೈದಿ ಪರಾರಿಯಾಗುವ ಸಂಚು ಹೂಡಿಸಲು ಅನುವು ಮಾಡಿಕೊಟ್ಟಿದ್ದು;
2. ಸೇಡಂ ಬಸ್ ನಿಲ್ದಾಣದಲ್ಲಿ ಖೈದಿಯ ನಿಕಟವರ್ತಿ ತಂದು ಕೊಟ್ಟ ಪಾನೀಯ (ಕಬ್ಬಿನ ಹಾಲು) ಕುಡಿದಿದ್ದು;
3. ನೀವು ಹೊರಟ ಬಸ್ಸಿನಲ್ಲಿಯೇ ಖೈದಿಯ ಸಂಬಂಧಿಕರನ್ನು ಜೊತೆಗೆ ಕರೆದುಕೊಂಡು ಹೋಗಿದ್ದು; ಮತ್ತು

4. ಖೈದಿಯ ಕೈ ಕೊಳವನ್ನು ಹಾಗೇ ಬಿಟ್ಟು ಖೈದಿ ಪರಾರಿ ಆಗಲು ಅನುಕೂಲ ಮಾಡಿಕೊಟ್ಟು ಅತೀವ ಬೇಜವಾಬ್ದಾರಿತನ ಹಾಗೂ ಅತೀವ ನಿರ್ಲಕ್ಷ್ಯತನ ಪ್ರದರ್ಶಿಸಿದ ಬಗ್ಗೆ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ಗುಲ್ಬರ್ಗಾ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:14-09-2004ರ ಆದೇಶದಲ್ಲಿ ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂಬರುವ ವಾರ್ಷಿಕ ವೇತನ ಬಡ್ತಿಗಳ ಮೇಲೆ ಪರಿಣಾಮ ಬೀರುವಂತೆ ಮೂರು ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಈಶಾನ್ಯ ವಲಯ, ಗುಲ್ಬರ್ಗಾ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:02-03-2005 ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಖೈದಿಯನ್ನು ಪರಾರಿ ಆಗಲು ಬಿಟ್ಟಿದ್ದು, ಖೈದಿಯ ಕೈ ಕೋಳವನ್ನು ಹಾಗೇ ಬಿಟ್ಟಿದ್ದು, ಪರಾರಿ ಆಗಲು ಅನುವುಮಾಡಿಕೊಟ್ಟು, ಖೈದಿಯ ನಿಕಟವರ್ತಿಗಳು ತಂದುಕೊಟ್ಟ ಪಾನೀಯ ಕುಡಿದಿರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುತ್ತದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷ್ಯತೆ, ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು ಕಂಡುಬರುತ್ತದೆ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 04 ಪೊಸಿಇ 2006, ಬೆಂಗಳೂರು, ದಿನಾಂಕ: 10ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಗಳು, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಶಿವಶರಣಪ್ಪ, ಪಿಸಿ-354 ಗುಲ್ಬರ್ಗಾ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:14-07-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಪಿ.ಆರ್. 290

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

**ವಿಷಯ:** ಶ್ರೀ ರಾಜಗೋಪಾಲ್ ಅಯ್ಯಂಗಾರ್, ಎಎಸ್ಐ, ಜ್ಞಾನಭಾರತಿ ಠಾಣೆ, ಹಾಲಿ ವಿಲ್ಸನ್‌ಗಾರ್ಡನ್ ಪೊಲೀಸ್ ಠಾಣೆ, ಬೆಂಗಳೂರು ರವರು ಸರ್ಕಾರಕ್ಕೆ ಸಲ್ಲಿಸಿರುವ ಪರಿಷ್ಕರಣ ಮೇಲ್ಮನವಿ ಅರ್ಜಿ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್, ಪಶ್ಚಿಮ ವಿಭಾಗ, ಬೆಂಗಳೂರು ಇವರ ಆದೇಶ ಸಂಖ್ಯೆ:ಡಿಇ/ಆರ್-6 /ಡಿಸಿಪಿ/ಪ/15/97-99 ದಿನಾಂಕ:30-10-1999.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್, ಬೆಂಗಳೂರು ನಗರ ಇವರ ಆದೇಶ ಸಂಖ್ಯೆ:49/ಅಪೀಲು/99-2000, ದಿನಾಂಕ:01-02-2001.
3. ಅರ್ಜಿದಾರರ ಪರೀಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:18-07-2001.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು, ಇವರ ಪತ್ರ ಸಂಖ್ಯೆ: ಅಪೀಲು/3/33/2001-02.

**ಪ್ರಸ್ತಾವನೆ:**

ಶ್ರೀ ರಾಜಗೋಪಾಲ ಅಯ್ಯಂಗಾರ್, ಎಎಸ್ಐ, ಬೆಂಗಳೂರು ಇವರ ವಿರುದ್ದ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ದೋಷರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರ ನಿಯಮ 6 ರಡಿ ಇಲಾಖಾ ವಿಚಾರಣೆ ನಡೆಸಲಾಗಿದೆ.

**ದೋಷರೋಪಣೆ:**

ಈ ದಿನಾಂಕ:19-01-1995ರಂದು ಶ್ರೀಮತಿ ಎಸ್.ಎಲ್.ಸರಸ್ವತಮ್ಮ ಕೋಂ ಟಿ.ಚನ್ನಪ್ಪಯ್ಯ, ನಂ.920, 22ನೇ ಮುಖ್ಯ ರಸ್ತೆ, 4ನೇ ಟಿ ಬ್ಲಾಕ್, ಜಯನಗರ, ಬೆಂಗಳೂರು-11 ರವರಿಗೆ ನಿಮ್ಮ ಸ್ವಾಧೀನದ ಬೆಂಗಳೂರು ನಗರ ಸಾರಕ್ಕಿ 1ನೇ ಹಂತದ ಬಿ.ಡಿ.ಎ.

ಬಡಾವಣೆಯಲ್ಲಿನ ಮನೆ ನಂ.872ನ್ನು ರೂ. 4,65,000-00 ಗಳಿಗೆ ಮಾರಿ ಮುಂಗಡ ಹಣವಾಗಿ ರೂ.1,00,000-00 ಹಣವನ್ನು ನಂತರ ದಿನಾಂಕ:16-03-95 ರಂದು ರೂ.20,000-00 ಮತ್ತು ದಿನಾಂಕ:6-7-95ರಂದು ರೂ.10,000-00ರಂತೆ ಒಟ್ಟು ರೂ.2,30,000-00 ಹಣ ಪಡೆದು ಮನೆಯನ್ನು ಮಗಳ ಮದುವೆಯ ನಂತರ ರಿಜಿಸ್ಟರ್ ಮಾಡಿಸಿ ಕೊಡುತ್ತೇವೆಂದು ಹೇಳಿ, ರಿಜಿಸ್ಟ್ರೇಷನ್ ಮಾಡಿಸಿಕೊಡದೇ, ಇದನ್ನು ಕೇಳಲು ಬಂದಾಗ ಪಿರ್ಯಾದುದಾರರಿಗೆ ಕೊಲೆ ಬೆದರಿಕೆ ಹಾಕದ್ದು, ಅಲ್ಲದೆ ಪೋನ್ ಮೂಲಕ ಶ್ರೀರಾಂಪುರದ ರೌಡಿಗಳು ತನಗೆ ಪರಿಚಯವಿದ್ದು, ಅವರಿಂದ ಹೊಡೆಸುವುದಾಗಿ ಆಕೆಯ ಗಂಡನಿಗೂ ಪ್ರಾಣ ಬೆದರಿಕೆ ಹಾಕಿದ್ದು, ಈ ಬಗ್ಗೆ ಕೆಂಗೇರಿಗೇಟ್ ಪೊಲೀಸ್ ಠಾಣೆ, ಮನೆ.ನಂ.32/97, ಕಲಂ 420-508 ಐಪಿಸಿ ಮೊಕದ್ದಮೆಯಲ್ಲಿ ಕ್ರಿಮಿನಲ್ ಅಪರಾಧಿಯಾಗಿದ್ದು, ದಸ್ತಗಿರಿಯಾಗಿರುತ್ತೀರಿ. ಇದು ನಿಮ್ಮ ಅತೀವ ಅಧಿಕಾರ ದುರುಪಯೋಗ ಹಾಗೂ ತೀವ್ರವಾದ ದುರ್ನಡತೆಯಾಗಿರುತ್ತದೆ.''

ಮೇಲ್ಕಂಡ ಆರೋಪದ ಮೇಲೆ ಇಲಾಖಾ ವಿಚಾರಣೆ ನಡೆಸಿ, ವಿಚಾರಣಾಧಿಕಾರಿಗಳು ಆರೋಪ ಸಾಬೀತಾಗಿದೆ ಎಂದು ಸಲ್ಲಿಸಿದ ವರದಿ ಆಧಾರದ ಮೇಲೆ ಅರ್ಜಿದಾರರ ಸಮಜಾಯಿಷಿ ಪಡೆದು, ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಉಪ ಪೊಲೀಸ್ ಕಮೀಷನರ್ ಪಶ್ಚಿಮ ವಿಭಾಗ, ಬೆಂಗಳೂರು ಇವರು ಮೇಲೆ ಕ್ರಮ ಸಂಖ್ಯೆ: (1)ರಲ್ಲಿ ಓದಲಾದ ದಿನಾಂಕ:30-10-1999ರ ಆದೇಶದಲ್ಲಿ ಅರ್ಜಿದಾರರ ವೇತನವನ್ನು ಎಎಸ್ಐ ಹುದ್ದೆಯ ವೇತನದ ಕನಿಷ್ಠ ಮಟ್ಟಕ್ಕೆ ಇಳಿಸಿ, ಹೊಸದಾಗಿ ವಾರ್ಷಿಕ ವೇತನ ಬಡ್ತಿಯನ್ನು ಗಳಿಸುವ ದಂಡನೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ ಸಲ್ಲಿಸಿದ್ದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಅಡಿಷನಲ್ ಪೊಲೀಸ್ ಕಮೀಷನರ್, ಆಡಳಿತ ಮತ್ತು ಸಿಎಆರ್ ಬೆಂಗಳೂರು, ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲದಿದ್ದರೂ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ಶಿಕ್ಷೆ ಅತೀ ಹೆಚ್ಚಿನದೆಂದು ಪರಿಗಣಿಸಿ, ಮೇಲೆ ಕ್ರಮ ಸಂಖ್ಯೆ:(2) ರಲ್ಲಿ ಓದಲಾದ ದಿನಾಂಕ:01-02-2001ರ ಆದೇಶದಲ್ಲಿ ಶಿಸ್ತು ಪ್ರಾಧಿಕಾರಿಯ ಆದೇಶವನ್ನು ಮಾರ್ಪಡಿಸಿ, ಅರ್ಜಿದಾರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆ ಆಗುವಂತೆ ಮೂರು ವರ್ಷಗಳ ಕಾಲ ಮುಂದೂಡಿದ ಶಿಕ್ಷೆ ವಿಧಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ, ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ಇಲಾಖಾ ವಿಚಾರಣೆ ದಾಖಲೆಗಳನ್ನು ಪರಿಶೀಲಿಸಲಾಗಿದೆ. ಶಿಸ್ತು ಪ್ರಾಧಿಕಾರವು ಆಪಾದಿತ ನೌಕರರಿಗೆ ಪಿಎಸ್ಐ ಹುದ್ದೆಯಿಂದ ಎ.ಎಸ್.ಐ. ಹುದ್ದೆಯ ವೇತನದ ಕನಿಷ್ಟ ಮಟ್ಟಕ್ಕೆ ಇಳಿಸಿ, ವಾರ್ಷಿಕ ವೇತನ ಬಡ್ತಿಯನ್ನು ಹೊಸದಾಗಿ ಗಳಿಸುವಂತೆ ದಿನಾಂಕ:30-10-1999ರಂದು ವಿಧಿಸಿದ್ದ ದಂಡನಾದೇಶವನ್ನು ಅಪೀಲು ಪ್ರಾಧಿಕಾರವು ಜನವರಿ 2001ರಲ್ಲಿ ಈಗಾಗಲೇ ಮಾರ್ಪಡಿಸಿ ಸದರಿ ನೌಕರರ ಮುಂದಿನ ವಾರ್ಷಿಕ ವೇತನ ಬಡ್ತಿಯನ್ನು ಮುಂದಿನ ವಾರ್ಷಿಕ ವೇತನ ಬಡ್ತಿಗಳಿಗೆ ಧಕ್ಕೆಯಾಗುವಂತೆ ಮೂರು ವರ್ಷಗಳ ಕಾಲ ಮುಂದೂಡಿದೆ. ಆದರೆ, ಆಪಾದಿತ ನೌಕರರು ಕ್ರಿಮಿನಲ್ ಪ್ರಕರಣದಲ್ಲಿ ನ್ಯಾಯಾಲಯವು ದೋಷಮುಕ್ತಗೊಳಿಸಿರುವುದನ್ನು ಆಧರಿಸಿ ತಮ್ಮನ್ನು ಇಲಾಖಾ ವಿಚಾರಣೆಯಲ್ಲಿಯೂ ದೋಷಮುಕ್ತಗೊಳಿಸಿ, ದಂಡನೆಯನ್ನು ರದ್ದು ಪಡಿಸುವಂತೆ ಮತ್ತೊಮ್ಮೆ ಸರ್ಕಾರಕ್ಕೆ ಪರಿಷ್ಕರಣಾ ಮೇಲ್ಮನವಿ ಸಲ್ಲಿಸಿದ್ದಾರೆ. ಆದರೆ, ಇಲಾಖಾ ವಿಚಾರಣೆಯ ಫಲಿತಾಂಶವು ಬಹಳ ಸ್ಪಷ್ಟವಾಗಿದೆ. ನೌಕರರು ಶ್ರೀಮತಿ ಸರಸ್ವತಮ್ಮ ಅವರಿಗೆ ರೂ.1.3 ಲಕ್ಷಗಳನ್ನು ಮೋಸ ಮಾಡಿರುವುದು, ಅಧಿಕಾರ ದುರುಪಯೋಗಪಡಿಸಿಕೊಂಡಿರುವುದು ಹಾಗೂ ದುರ್ನಡತೆ ಎಸಗಿರುವುದು ಸಾಬೀತಾಗಿದೆ. ನ್ಯಾಯಾಲಯವು ಆಪಾದಿತರನ್ನು ಕ್ರಿಮಿನಲ್ ಮೊಕದ್ದಮೆಯಲ್ಲಿ ದೋಷಮುಕ್ತಗೊಳಿಸಿರುವುದು ಇಲಾಖಾ ವಿಚಾರಣೆಯಲ್ಲಿ ಸಾಬೀತಾಗಿರುವ ಫಲಿತಾಂಶಗಳ ಮೇಲೆ ಯಾವುದೇ ಪ್ರಭಾವ ಬೀರುವುದಿಲ್ಲ ಹಾಗೂ ಅಧಿಕ್ರಮಿಸುವುದಿಲ್ಲ. ಈ ಹಿನ್ನೆಲೆಯಲ್ಲಿ, ಮೇಲ್ಮನವಿ ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 163 ಪೊಸಿಅ 2001 ಬೆಂಗಳೂರು, ದಿನಾಂಕ: 31ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೋಲಿಸ್ (ಶಿಸ್ತು ನಡವಳಿ) ನಿಯಮಗಳು, 1965 ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ರಾಜಗೋಪಾಲ ಅಯ್ಯಂಗಾರ್, ಎಎಸ್ಐ ಜ್ಞಾನಭಾರತಿ ಪೊಲೀಸ್ ಠಾಣೆ, ಹಾಲಿ ವಿಲ್ಸನ್‌ಗಾರ್ಡನ್ ಪೊಲೀಸ್ ಠಾಣೆ, ಬೆಂಗಳೂರು ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:18-07-2001ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 291

**ವಿಷಯ:** ಶ್ರೀ ಡಿ.ಮುನಿಯಪ್ಪ, ಪಿಎಸ್ಐ (ಕ್ರೈಂ), ಹಿರಿಯೂರು ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ ರವರು ಸರ್ಕಾರಕ್ಕೆ ಸಲ್ಲಿಸಿರುವ, ಪರಿಷ್ಕರಣ ಮೇಲ್ಮನವಿ ಅರ್ಜಿ ಬಗ್ಗೆ.

**ಓದಲಾಗಿದೆ:**
1. ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರ ಆದೇಶ ಸಂಖ್ಯೆ:ಸಿಬ್ಬಂದಿ/5/ಪಿಆರ್-93/2002-03, ಓಬಿ ಸಂಖ್ಯೆ:196/2003-04, ದಿನಾಂಕ: 21.07.2003.
2. ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್, ಪೂರ್ವ ವಲಯ, ದಾವಣಗೆರೆ ಇವರ ಆದೇಶ ಸಂಖ್ಯೆ: ಅಪೀಲು/33/2003-04, ಓಬಿ ಸಂಖ್ಯೆ:100/2004-05, ದಿನಾಂಕ:10.11.2004.
3. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿ ದಿನಾಂಕ:05-04-2005.
4. ಮಹಾ ನಿರ್ದೇಶಕರು ಮತ್ತು ಆರಕ್ಷಕ ಮಹಾ ನಿರೀಕ್ಷಕರು, ಬೆಂಗಳೂರು ಇವರ ಪತ್ರ ಸಂಖ್ಯೆ:ಅಪೀಲು/2/62/2005, ದಿನಾಂಕ:27-09-2005.

**ಪ್ರಸ್ತಾವನೆ:**

ಶ್ರೀ ಡಿ.ಮುನಿಯಪ್ಪ, ಪಿಎಸ್ಐ (ಕ್ರೈಂ) ಹಿರಿಯೂರು ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ, ಇವರ ವಿರುದ್ಧ (ಇನ್ನು ಮುಂದೆ ಅರ್ಜಿದಾರರೆಂದು ಕರೆಯಲ್ಪಡುವ) ಈ ಕೆಳಕಂಡ ಆರೋಪಕ್ಕಾಗಿ ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಾವಳಿ 1965 ರ ನಿಯಮ 7 ರಡಿ ದೋಷರೋಪಣಾ ಪತ್ರ ಹೊರಡಿಸಲಾಗಿದೆ.

**ದೋಷರೋಪಣೆ:**

"ನೀವು ಈ ಮುಂಚೆ ಬಿಳಿಚೋಡು ಠಾಣೆಯಲ್ಲಿ OOD ಮೇರೆಗೆ ಕೆಲಸ ಮಾಡುತ್ತಿದ್ದಾಗ ದಿನಾಂಕ:06-06-02ರಂದು ಕಾಟೇನಹಳ್ಳಿ ಗ್ರಾಮದ ಶ್ರೀ ಕೆ.ಎಂ.ಶಿವಕುಮಾರ್ ಎಂಬುವವರನ್ನು ಠಾಣೆಗೆ ಕರೆಯಿಸಿ, ಸಿವಿಲ್ ವ್ಯಾಜ್ಯದಲ್ಲಿ ಮಧ್ಯೆ ಪ್ರವೇಶಿಸಿ, ಇವರ ತಂದೆಯ ಜಮೀನು ಮಾರಾಟದ ಬಗ್ಗೆ ಸಹಿ ಹಾಕಲು ಒತ್ತಾಯ ಪಡಿಸಿದ್ದು, ಇದಕ್ಕೆ ಅವರು ಒಪ್ಪದೇ ನಿರಾಕರಿಸಿದ್ದರಿಂದ, ನೀವು ಅವರ ಮೇಲೆ ರಕ್ತ ಬರುವಂತೆ ಹಲ್ಲೆ ಮಾಡಿ, ಕರ್ತವ್ಯ ದುರ್ವರ್ತನೆ ಮತ್ತು ಅಧಿಕಾರ ದುರುಪಯೋಗವನ್ನು ಪ್ರದರ್ಶಿಸಿದ್ದೀರಿ."

ಮೇಲ್ಕಂಡ ಆರೋಪದ ಮೇಲೆ ದೋಷಾರೋಪಣಾ ಪತ್ರ ಹೊರಡಿಸಿ ಅರ್ಜಿದಾರರ ಸಮಜಾಯಿಷಿ ಪಡೆದು ಅದನ್ನೊಪ್ಪದ ಶಿಸ್ತು ಪ್ರಾಧಿಕಾರಿ ಹಾಗೂ ಪೊಲೀಸ್ ಅಧೀಕ್ಷಕರು, ದಾವಣಗೆರೆ ಜಿಲ್ಲೆ, ಇವರು ಮೇಲೆ ಕ್ರಮ ಸಂಖ್ಯೆ:(1) ರಲ್ಲಿ ಓದಲಾದ ದಿನಾಂಕ:21-07-2003ರ ಆದೇಶದಲ್ಲಿ ಅರ್ಜಿದಾರರಿಗೆ (ಛೀಮಾರಿ) `ಸೆನ್ಸೂರ್` ದಂಡನೆ ವಿಧಿಸಿ, ದಿನಾಂಕ:28-06-2002 ರಿಂದ 29-08-2002ರವರೆಗಿನ ಅವಧಿಯನ್ನು ಅಮಾನತ್ತೆಂದೇ ಪರಿಗಣಿಸಿ ಶಿಕ್ಷೆ ವಿಧಿಸಿರುತ್ತಾರೆ.

ಈ ಆದೇಶದ ವಿರುದ್ಧ, ಸಲ್ಲಿಸಿದ ಅರ್ಜಿದಾರರ ಮೇಲ್ಮನವಿಯನ್ನು ಪರಿಶೀಲಿಸಿದ ಮೇಲ್ಮನವಿ ಪ್ರಾಧಿಕಾರಿ ಹಾಗೂ ಇನ್ಸ್‌ಪೆಕ್ಟರ್ ಜನರಲ್ ಆಫ್ ಪೊಲೀಸ್ ಪೂರ್ವ ವಲಯ, ದಾವಣಗೆರೆ ಇವರು ಮೇಲ್ಮನವಿಯಲ್ಲಿ ಪರಿಗಣಿಸಬಹುದಾದಂತಹ ಯಾವುದೇ ಅಂಶಗಳಿಲ್ಲವೆಂದು ಅರ್ಜಿದಾರರ ಮೇಲ್ಮನವಿಯನ್ನು ಮೇಲೆ ಕ್ರಮ ಸಂಖ್ಯೆ:(2)ರಲ್ಲಿ ಓದಲಾದ ದಿನಾಂಕ:10-11-2004ರ ಆದೇಶದಲ್ಲಿ ಮೇಲ್ಮನವಿಯನ್ನು ತಿರಸ್ಕರಿಸಿರುತ್ತಾರೆ.

ಈ ಎರಡೂ ಆದೇಶಗಳ ವಿರುದ್ಧ ಅರ್ಜಿದಾರರು ಸರ್ಕಾರಕ್ಕೆ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ಸಲ್ಲಿಸಿರುತ್ತಾರೆ. ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿನ ವಾದಾಂಶಗಳನ್ನೂ, ದೋಷಾರೋಪಣ ಪತ್ರವನ್ನು ಪರಿಶೀಲಿಸಲಾಗಿದೆ. ಅರ್ಜಿದಾರರು ಶಿಸ್ತಿನ ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿದ್ದು, ಅತೀವ ನಿರ್ಲಕ್ಷತೆ ದುರ್ನಡತೆ ಹಾಗೂ ಬೇಜವಾಬ್ದಾರಿತನ ಪ್ರದರ್ಶಿಸಿರುವುದು, ಅಧಿಕಾರ ದುರುಪಯೋಗ ಪಡಿಸಿಕೊಂಡಿರುವುದು ಕಂಡು ಬರುತ್ತದೆ. ಅರ್ಜಿದಾರರ ಪರಿಷ್ಕರಣ ಮೇಲ್ಮನವಿ ಅರ್ಜಿಯಲ್ಲಿ ಪರಿಗಣಿಸ ಬಹುದಾದಂತಹ ಯಾವುದೇ ಹೊಸ ಅಂಶಗಳನ್ನು ಮಂಡಿಸಿರುವುದಿಲ್ಲ. ಆದ್ದರಿಂದ, ಶಿಸ್ತು ಪ್ರಾಧಿಕಾರಿಯು ವಿಧಿಸಿರುವ ದಂಡನಾ ಆದೇಶದಲ್ಲಿ ಹಸ್ತಕ್ಷೇಪ ಮಾಡುವ ಅಗತ್ಯತೆ ಕಂಡು ಬರುತ್ತಿಲ್ಲವೆಂದು ಪರಿಗಣಿಸುತ್ತಾ, ಸರ್ಕಾರವು ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಒಇ 337 ಪೊಸಿಅ 2005 ಬೆಂಗಳೂರು, ದಿನಾಂಕ: 12ನೇ ಜನವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ, ಕರ್ನಾಟಕ ರಾಜ್ಯ ಪೊಲೀಸ್ (ಶಿಸ್ತು ನಡವಳಿ) ನಿಯಮಗಳು 1965ರಡಿ ಸರ್ಕಾರಕ್ಕೆ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಶ್ರೀ ಡಿ.ಮುನಿಯಪ್ಪ, ಪಿಎಸ್ಐ (ಕ್ರೈಂ) ಹಿರಿಯೂರು ಪೊಲೀಸ್ ಠಾಣೆ, ದಾವಣಗೆರೆ ಜಿಲ್ಲೆ, ಇವರು ಸರ್ಕಾರಕ್ಕೆ ಸಲ್ಲಿಸಿದ್ದ ದಿನಾಂಕ:05-04-2005ರ ಪರಿಷ್ಕರಣ ಮೇಲ್ಮನವಿ ಅರ್ಜಿಯನ್ನು ತಿರಸ್ಕರಿಸಿದೆ.

ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಕೆ. ಗುಂಡೂರಾವ್**

ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ, (ಪೊಲೀಸ್ ಸೇವೆಗಳು)

ಪಿ.ಆರ್. 292

## ENERGY SECRETARIAT

**Sub**: Enhancement of allotted capacity of Wind Power Project from 102.4 MW to 192 MW in favour of M/s Enercon (I) Limited-reg.

**Read:** 1 Government Order No : EN 198 NCE 2005, dated : 18.8.2005.

2 Letter No : KRED / 08 / EIL / 2006 / 259, dated : 28/31.01.2006 received from the Managing Director, Karnataka Renewable Energy Development Limited, Bangalore.

**PREAMBLE** :

In the Government order read at (1) above, the sanction has been accorded to implement 102.4 MW capacity Wind Power Project at Belgaum District to M/s Enercon (I) Limited.

After the assessment of wind potential and flow of the wind in the allotted site, the Managing Director, Karnataka Renewable Energy Development Limited, Bangalore, vide his letter read at (2) above has recommended to Government to enhance the capacity from 102.4 MW to 192 MW.

The proposal has been examined at Government level and hence the following order :

**Government Order No : EN 60 NCE 2006, Bangalore, Dated: 10th February 2006**

Government is pleased to accord sanction to M/s Enercon (I) Limited, for enhancement of the capacity of Wind Power Project from 102.4 MW to 192 MW at Belgaum District as detailed below :

| Sl. No. | Proposed capacity in MW | Nearby villages of the proposed areas | Geographical area description of the project | Additional capacity being enhanced in Stage-I | Total capacity including enhanced capacity of Stage-I |
|---|---|---|---|---|---|
| 1 | 2 | 3 | 4 | 5 | 6 |
| 1 | 22.4 MW | Murgod, Rudrapur, Rudrapur Thanda, Subapur, Belgaum district. | A large plateau situated on the East and SE of Murgod village. The plateau does not have any significant orientation. The potential area for development of wind power projects are identified as ‘A’ and ‘B’. these two areas are situated in Reserved Forest and the external features of the area as for the topomap, it is a mixture of open and dense scrub. The proposed area is covered in the following Geographical co-ordinates:<br>**Latitude**: 15°51’18”- 15°55’0” N<br>**Longitude**: 74°56’45”- 75°0’0” E<br>**Peaks**: 800, 836, 822, 859m Amsl | 16 | 38.4 |
| 2 | 6.4 MW | Yekkundi, Dhupdal, Belgaum district. | A NW-SE oriented ridge located on the North of Dhupdal village and is identified as Area ‘O’. The identified area is a large plateau and external features of the area are open and dense scrub. The proposed area is covered in the following Geographical co-ordinates:<br>**Latitude**: 15°0’0”- 15°0’35” N<br>**Longitude**: 75°51’13”- 75°52’42” E<br>**Peaks**: 855, 844m Amsl | Not subject for enhancement | 6.4 |
| | 12 MW | Goravan-kolla, Katmalli, and Huli, Belgaum district. | A large plain area in ‘U’ shape designated as ‘P’ and is located on N-E of Saundatti and surrounded by Goravankolla, Katmalli, and Huli villages. This plateau has rocky knobs and scattered eucalyptus. Plants The proposed area is covered in the following Geographical co-ordinates:<br>**Latitude**: 15°8’11”- 15°10’41” N<br>**Longitude**: 75°47’32”- 75°48’52” E<br>**Peaks**: 751, 756, 784m Amsl | 11.2 | 23.20 |

| 1 | 2 | 3 | 4 | 5 | 6 |
|---|---|---|---|---|---|
| | 17.6 MW | Mallapur, Basidoni and Gorobal, Belgaum district. | A large NE-SW oriented ridge identified, as 'Q' is located on the East of Manoli town. This potential area is surrounded by Mallapur, Basidoni and Gorobal. Village The area is situated in its reserved forest and the external features are open scrub. The proposed area is covered in the following Geographical co-ordinates:<br>**Latitude**: 15°10'53"- 15°14'47" N<br>**Longitude**: 75°49'52"- 75°53'23" E<br>**Peaks**: 744, 729, 750m Amsl | 22.4 | 40 |
| 3 | 12 MW | Sirsangi, Guvan-kopa, Mallur, Belgaum district. | A NW-SE oriented plateau identified as 'A' is located on the SW of Rampur and is surrounded by Sirsangi, Guvankopa, Mallur. The entire plateau is open scrub and connects with Road unmetal ground. The proposed area is covered in the following Geographical co-ordinates:<br>**Latitude** 15°52'36"- 15°55'26" N<br>**Longitude**: 75°15'0"-75°16'51"E<br>**Peaks**: 743, 781m Amsl | 19.2 | 31.20 |
| | 17.6 MW | Kollur, Jalikatte, Mullur Belgaum district. | The proposed area is has two independent hill ranges, Of that, one is oriented predominantly in E-W direction and another is in the NW-SE direction and is identified as 'B'. These areas are located on the S-E of Rampur town. These areas are having rocky knobs and are having open scrub features The proposed areas are covered in the following Geographical co-ordinates:<br>**Latitude** 15°52'36"- 15°55'17" N<br>**Longitude**: 75°17'58"-75°23'42"E<br>**Peaks**: 742, 755, 742, 708, 672m Amsl | 18.4 | 36 |
| | 8 MW | Halgatti, Belgaum district. | A circular plateau located on the East of Ramdurg town and the area is identified as 'C' & is situated in the Reserved Forest. The proposed area appears to be open scrub and is covered in the following Geographical co-ordinates:<br>**Latitude** 15°56'32"- 15°57'46" N<br>**Longitude**: 75°20'55"-75°22'45"E<br>**Peaks**: 660,711m Amsl | Not subjecting for enhancement of capacity | 8 |
| | 6.4 MW | Mudenur, Belgaum district. | A NW and SE oriented large plateau is located on the North of Ramdurga town and is identified as 'D'. The proposed area is appears to be open scrub and is covered in the following Geographical co-ordinates:<br>**Latitude** 15°58'36"- 15°59'14" N<br>**Longitude**: 75°18'24"-75°19'53"E<br>**Peaks**: 689m Amsl | 2.4 | 8.8 |
| **Total** | | **102.4 MW** | | **89.6 MW** | **192 MW** |

The other terms and conditions of the allotment order shall continue as it is.

By Order and in the Name of the Governor of Karnataka,

**SURESH.B.KRISHNAPPANAVAR**

Under Secretary to Government,

Energy Department.

P.R. 293

**Sub:** Transfer of 1.2 MW Wind Power Capacity in favour of M/s V.S. Lad & sons-reg.

**Read:**
1. Government Order No : DE 26 NCE 1999, dated : 13.5.1999.
2. Government Order No : DE 32 NCE 2004, dated : 3.3.2004.
3. Letter No : KRED/08/VSL&S/2006/368 dated : 17.2.2006 received from the Managing Director, Karnataka Renewable Energy Development Limited, Bangalore.

**Preamble** :

In the Government Order dated 3.3.2004 read at (2) above, sanction has been accorded for implementation of 25 MW capacity Wind Power Project at Davangere District to M/s Vestas RRB India Limited.

Now, the Managing Director, Karnataka Renewable Energy Development Limited, Bangalore, in his letter dated:17.2.2006 read at (3) above, has recommended to the Government for transfer of 1.2 MW Wind Power capacity in favour of M/s V.S. Lad & sons from out of sanctioned 25 MW Wind Power Capacity at Neralagundhi and Kumbaluru Villages of Honnali Taluk, Davangere District to M/s Vestas RRB India Limited.

The proposal has been examined and pass the following order :

**Government Order No : EN 92 NCE 2006, Bangalore, Dated: 24th February 2006**

Government is pleased to accord sanction for transfer of 1.2 MW Wind Power capacity in favour of M/s V.S. Lad & sons from out of sanctioned 25 MW Wind Power Capacity at Neralgundi and Kumbaluru villages of Honnali Taluk, Davangere District to M/s Vestas RRB India Limited.

The terms and conditions of the Government Order read at (1) above shall **IPSO FACTO** applicable.

By Order and in the Name of the Governor of Karnataka,

P.R. 322 **SURESH.B.KRISHNAPPANAVAR**

Under Secretary to Government, Energy Department.

**Sub:** Transfer of 2.4 MW Wind Power Capacity in favour of M/s R.B. Seth Shreem Narasingdas-reg.

**Read:**
1. Government Order No : DE 26 NCE 1999, dated : 13.5.1999.
2. Government Order No : DE 32 NCE 2004, dated : 3.3.2004.
3. Letter No : KRED/08/RBSN/2006/369 dated : 17.2.2006 received from the Managing Director, Karnataka Renewable Energy Development Limited, Bangalore.

**PREAMBLE** :

In the Government Order dated 3.3.2004 read at (2) above, sanction has been accorded for implementation of 25 MW capacity Wind Power Project at Davangere District to M/s Vestas RRB India Limited.

Now, the Managing Director, Karnataka Renewable Energy Development Limited, Bangalore, in his letter dated:17.2.2006 read at (3) above, has recommended to the Government for transfer of 2.4 MW Wind Power capacity in favour of M/s R.B. Seth Shreem Narasingdas from out of sanctioned 25 MW Wind Power Capacity at Hurulihalli, Haralipur, Yalavadhalli and Marabanahalli villages of Channagiri Taluk, Davangere District to M/s Vestas RRB India Limited.

The proposal has been examined and pass the following order :

**Government Order No : EN 93 NCE 2006, Bangalore, Dated: 24th February 2006**

Government is pleased to accord sanction for transfer of 2.4 MW Wind Power capacity in favour of M/s R.B. Seth Shreem Narasingdas from out of sanctioned 25 MW Wind Power Capacity at Hurulihalli, Haralipur, Yalavadhalli and Marabanahalli villages of Channagiri Taluk, Davangere District to M/s Vestas RRB India Limited.

The terms and conditions of the Government Order read at (1) above shall **IPSO FACTO** applicable.

By Order and in the Name of the Governor of Karnataka,

P.R. 323 **SURESH.B.KRISHNAPPANAVAR**

Under Secretary to Government, Energy Department.

**Sub:** Transfer of 0.6 MW Wind Power Capacity in favour of M/s P. Venganna Setty & Bros.-reg.

**Read:**
1. Government Order No : DE 26 NCE 1999, dated : 13.5.1999.
2. Government Order No : DE 32 NCE 2004, dated : 3.3.2004.
3. Letter No : KRED/08/PVS&B-VRRB/2006/364 dated : 17.2.2006 received from the Managing Director, Karnataka Renewable Energy Development Limited, Bangalore.

**PREAMBLE** :

In the Government Order dated 3.3.2004 read at (2) above, sanction has been accorded for implementation of 25 MW capacity Wind Power Project at Davangere District to M/s Vestas RRB India Limited.

Now, the Managing Director, Karnataka Renewable Energy Development Limited, Bangalore, in his letter dated:17.2.2006 read at (3) above, has recommended to the Government for transfer of 0.6 MW Wind Power capacity in favour of M/s P. Venganna Setty & Bros. from out of sanctioned 25 MW Wind Power Capacity at Yalavadhalli and Marabanahalli villages of Channagiri Taluk, Davangere District to M/s Vestas RRB India Limited.

The proposal has been examined and pass the following order :

**Government Order No : EN 94 NCE 2006, Bangalore, Dated: 24th February 2006**

Government is pleased to accord sanction for transfer of 0.6 MW Wind Power capacity in favour of M/s P. Venganna Setty & Bros. from out of sanctioned 25 MW Wind Power Capacity at Yalavadhalli and Marabanahalli villages of Channagiri Taluk, Davangere District to M/s Vestas RRB India Limited.

The terms and conditions of the Government Order read at (1) above shall **IPSO FACTO** applicable.

By Order and in the Name of the Governor of Karnataka,

P.R. 324

**SURESH.B.KRISHNAPPANAVAR**

Under Secretary to Government, Energy Department.

**Sub:** Transfer of 1.2 MW Wind Power Capacity in favour of M/s M. Mahabaleswarappa & Sons-reg.

**Read:**
1. Government Order No : DE 26 NCE 1999, dated : 13.5.1999.
2. Government Order No : DE 32 NCE 2004, dated : 3.3.2004.
3. Letter No : KRED/08/MMS/2006/370 dated : 17.2.2006 received from the Managing Director, Karnataka Renewable Energy Development Limited, Bangalore.

**PREAMBLE** :

In the Government Order dated 3.3.2004 read at (2) above, sanction has been accorded for implementation of 25 MW capacity Wind Power Project at Davangere District to M/s Vestas RRB India Limited.

Now, the Managing Director, Karnataka Renewable Energy Development Limited, Bangalore, in his letter dated:17.2.2006 read at (3) above, has recommended to the Government for transfer of 1.2 MW Wind Power capacity in favour of M/s M. Mahabaleswarappa & Sons from out of sanctioned 25 MW Wind Power Capacity at Hurulihalli and Haralipur villages of Channagiri Taluk, Davangere District to M/s Vestas RRB India Limited.

The proposal has been examined and pass the following order :

**Government Order No : EN 95 NCE 2006, Bangalore, Dated: 24th February 2006**

Government is pleased to accord sanction for transfer of 0.2 MW Wind Power capacity in favour of M/s M. Mahabaleswarappa & sons from out of sanctioned 25 MW Wind Power Capacity at Hurulihalli and Haralipur villages of Channagiri Taluk, Davangere District to M/s Vestas RRB India Limited.

The terms and conditions of the Government Order read at (1) above shall **IPSO FACTO** applicable.

By Order and in the Name of the Governor of Karnataka,

P.R. 325

**SURESH.B.KRISHNAPPANAVAR**

Under Secretary to Government, Energy Department.

**Sub:** Transfer of 6 MW Wind Power Capacity in favour of M/s MSPL Limited-reg.

**Read:**
1. Government Order No : DE 26 NCE 1999, dated : 13.5.1999.
2. Government Order No : DE 32 NCE 2004, dated : 3.3.2004.
3. Letter No : KRED/08/MSPL-VVRRB/2006/365 dated : 17.2.2006 received from the Managing Director, Karnataka Renewable Energy Development Limited, Bangalore.

**PREAMBLE** :

In the Government Order dated 3.3.2004 read at (2) above, sanction has been accorded for implementation of 25 MW capacity Wind Power Project at Davangere District to M/s Vestas RRB India Limited.

Now, the Managing Director, Karnataka Renewable Energy Development Limited, Bangalore, in his letter dated:17.2.2006 read at (3) above, has recommended to the Government for transfer of 6 MW

Wind Power capacity in favour of M/s MSPL Limited from out of sanctioned 25 MW Wind Power Capacity at Neralgundi, Kumbalur, Yalavahalli, Hurulihalli, Haralipur nd Marabanahalli villages of Honnali and Channagiri Taluks, Davangere District to M/s Vestas RRB India Limited.

The proposal has been examined and pass the following order :

**Government Order No : EN 96 NCE 2006, Bangalore, Dated: 24th February 2006**

Government is pleased to accord sanction for transfer of 6 MW Wind Power capacity in favour of M/s MSPL Limited from out of sanctioned 25 MW Wind Power Capacity at Neralgundi, Kumbalur, Yalavahalli, Hurulihalli, Haralipur and Marabanahalli villages of Honnali and Channagiri Taluk, Davangere District to M/s Vestas RRB India Limited.

The terms and conditions of the Government Order read at (1) above shall **IPSO FACTO** applicable.

By Order and in the Name of the Governor of Karnataka,

P.R. 326

**SURESH.B.KRISHNAPPANAVAR**

Under Secretary to Government, Energy Department.

**ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಸಚಿವಾಲಯ**

**ವಿಷಯ:** ಬೀದರ್ ಕಂದಾಯ ತಾಲ್ಲೂಕಿನ ನೋಟರಿ ಹೆಸರನ್ನು ನೋಟರಿ ರಿಜಿಸ್ಟರ್‌ನಿಂದ ತೆಗೆದು ಹಾಕುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂ ಲಾ 191 ಎಲ್‌ಸಿಎಲ್ 92 ದಿ: 08.04.93
2. ಸರ್ಕಾರಿ ಆದೇಶ ಸಂ ಲಾ 334 ಎಲ್‌ಎಎಂ 2000 ದಿ: 24.04.03
3. ಪತ್ರ ಸಂಖ್ಯೆ 1281/05 ದಿನಾಂಕ:10.03.05

**ಪ್ರಸ್ತಾವನೆ:**

ಶ್ರೀ ವೈಜನಾಥ್ ಪಾಟೀಲ್, ವಕೀಲರು ಇವರನ್ನು ಮೇಲೆ (1) ರಲ್ಲಿ ಓದಲಾದ ಆದೇಶದಲ್ಲಿ ಬೀದರ್ ಕಂದಾಯ ತಾಲ್ಲೂಕಿನ ನೋಟರಿಯಾಗಿ ನೇಮಕ ಮಾಡಲಾಗಿತ್ತು. ನಂತರ ಇವರನ್ನು ಮೇಲೆ (2) ರಲ್ಲಿ ಓದಲಾದ ಆದೇಶದಲ್ಲಿ ತ್ವರಿತಗತಿ ನ್ಯಾಯಾಲಯ ಬೀದರ್ ಇಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರನ್ನಾಗಿ ನೇಮಿಸಲಾಗಿತ್ತು.

ಈ ಕುರಿತಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು ಬೀದರ್ ಇವರು ಮೇಲೆ (3) ರಲ್ಲಿ ಓದಲಾದ ಪತ್ರದಲ್ಲಿ ಶ್ರೀಯುತರು ನೋಟರಿ ಕರ್ತವ್ಯ ಹಾಗೂ ತ್ವರಿತಗತಿ ನ್ಯಾಯಾಲಯ, ಬೀದರ್ ಇಲ್ಲಿ ವಿಶೇಷ ಸರ್ಕಾರಿ ಅಭಿಯೋಜಕರ ಕರ್ತವ್ಯ ಎರಡನ್ನು ನಿರ್ವಹಿಸುತ್ತಿರುವುದರಿಂದ ಏಕಕಾಲದಲ್ಲಿ ಎರಡು ಹುದ್ದೆಗಳನ್ನು ನಿರ್ವಹಿಸಲು ಅವಕಾಶವಿರುವುದಿಲ್ಲವೆಂದು ಸಲ್ಲಿಸಿದ ವರದಿಯನ್ನು ಪರಿಶೀಲಿಸಿ ಸರ್ಕಾರ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 100 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 15ನೇ ಫೆಬ್ರವರಿ 2006**

ಈ ಹಿನ್ನೆಲೆಯಲ್ಲಿ ಶ್ರೀ ವೈಜನಾಥ್ ಪಾಟೀಲ್, ನೋಟರಿ, ಬೀದರ್ ಕಂದಾಯ ತಾಲ್ಲೂಕು ಇವರ ಹೆಸರನ್ನು ತಕ್ಷಣದಿಂದ ಜಾರಿಗೆ ಬರುವಂತೆ ನೋಟರಿಗಳ ರಿಜಿಸ್ಟರ್‌ನಿಂದ ಶಾಶ್ವತವಾಗಿ ತೆಗೆದು ಹಾಕಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲ**

ಪಿ.ಆರ್. 327

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

**ವಿಷಯ:** ಶ್ರೀ ತುಕಾರಾಂ ಗವಾಲಕರ್, ವಕೀಲರು, ಶಹಪುರ ಇವರನ್ನು ಶಹಪುರ ಕಂದಾಯ ತಾಲ್ಲೂಕಿನ ನೋಟರಿಯಾಗಿ ನೇಮಿಸುವ ಬಗ್ಗೆ.

**ಓದಲಾಗಿದೆ:**
1. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗ ಇವರ ಪತ್ರ ದಿನಾಂಕ:07.02.2005
2. ಸರ್ಕಾರಿ ಪತ್ರ ಸಂಖ್ಯೆ ಲಾ 116 ಎಲ್‌ಸಿಎಲ್ 04 ದಿ: 02.04.2005
3. ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗ ಇವರ ಪತ್ರ ದಿನಾಂಕ: 27.08.2005

**ಪ್ರಸ್ತಾವನೆ:**

ಶ್ರೀ ಎಸ್, ಬಿ. ಸಾಣೆ, ನೋಟರಿ, ಶಹಪುರ ಇವರು ನಿಧನರಾಗಿರುವುದಾಗಿ ಮೇಲೆ (1) ರಲ್ಲಿ ಓದಲಾದ ದಿನಾಂಕ:07.02.2005 ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಇವರು ತಿಳಿಸಿರುತ್ತಾರೆ. ಅದರನ್ವಯ ಮೇಲೆ (2) ರಲ್ಲಿ ಓದಲಾದ ದಿನಾಂಕ:02.04.2005 ಸರ್ಕಾರಿ ಪತ್ರದಲ್ಲಿ ಸದರಿ ಹುದ್ದೆಯ ನೇಮಕಾತಿಗೆ ಪ್ರಸ್ತಾವನೆ ಸಲ್ಲಿಸುವಂತೆ ಪ್ರಧಾನ ಜಿಲ್ಲಾ ಮತ್ತು ಸತ್ರನ್ಯಾಯಾಧೀಶರು, ಗುಲ್ಬರ್ಗಾ ಇವರನ್ನು ಕೋರಲಾಗಿತ್ತು ಮೇಲೆ (3) ರಲ್ಲಿ ಓದಲಾದ ದಿನಾಂಕ: 27.08.2005 ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಸತ್ರ ನ್ಯಾಯಾಧೀಶರು, ಗುಲ್ಬರ್ಗಾ ಇವರು ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಆ ಪ್ರಸ್ತಾವನೆ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಲಾ 116 ಎಲ್‌ಸಿಎಲ್ 2004, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2006**

ನೋಟರಿ ನಿಯಮಗಳ (1956) ರ ನಿಯಮ 8(1) ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅವುಗಳ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ತುಕಾರಾಂ ಗವಾಲಕರ್, ವಕೀಲರು, ಹೆಚ್.ನಂ.10-84/95, ಗಾಂಧೀ ರಸ್ತೆ, ಶಹಪುರ, ಗುಲ್ಬರ್ಗಾ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಶಹಪುರ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಿಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01- ನ್ಯಾಯ ಪರಿಪಾಲನೆ-501-0-ಇತರೆ ಸ್ವೀಕೃತಿಗಳು-06 ಇತರೆ ಬಾಬ್ತುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ವೃತ್ತಿ ಪ್ರಮಾಣ ಪತ್ರ ನೀಡಿದ ನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952) ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಆರ್. ಶಕುಂತಲ**

ಪಿ.ಆರ್. 328

ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2)

ಕಾನೂನು, ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಬಿ.ಸಿ. ಮುಧೋಳ್, ಮುಖ್ಯ ಇಂಜಿನಿಯರ್ ಅವರ ವಿರುದ್ಧ ಇಲಾಖಾ ವಿಚಾರಣೆ - ವಿಚಾರಣಾಧಿಕಾರಿ ಮತ್ತು ಮಂಡನಾಧಿಕಾರಿಯವರನ್ನು ನೇಮಿಸುವ ಬಗ್ಗೆ.

**ಓದಲಾಗಿದೆ:**
1. ನೋಟಿಸ್ ಸಂಖ್ಯೆ:ಸಿಆಸುಇ 51 ಎಸ್‌ಇಎನ್ 05 ದಿನಾಂಕ:8.8.05.
2. ಶ್ರೀ ಬಿ.ಸಿ. ಮುಧೋಳ್ ಅವರ ದಿನಾಂಕ: 30.9.05.

**ಪ್ರಸ್ತಾವನೆ:**

ಶ್ರೀ ಬಿ.ಸಿ. ಮುಧೋಳ್, ಮುಖ್ಯ ಇಂಜಿನಿಯರ್‌ರವರು ಬಾಗಲಕೋಟೆ ನಗರ ಅಭಿವೃದ್ಧಿ ಪ್ರಾಧಿಕಾರದಲ್ಲಿ ದಿ:1.3.03 ರಿಂದ 22.10.03ರವರೆಗೆ ಮುಖ್ಯ ಇಂಜಿನಿಯರ್ ಹುದ್ದೆಯಲ್ಲಿ ಕಾರ್ಯನಿರ್ವಹಿಸುತ್ತಿದ್ದಾಗ ಪ್ರಾಧಿಕಾರದ ವ್ಯಾಪ್ತಿಯಲ್ಲಿ 300 ಕಾಮಗಾರಿಗಳನ್ನು ಅವುಗಳ ಅಂದಾಜು ಪಟ್ಟಿಯನ್ನು ಸಿದ್ದಪಡಿಸದೆ ತಮಗೆ ಬೇಕಾದ ಕಂಟ್ರಾಕ್ಟರುಗಳಿಗೆ ನೀಡಿ ಅವುಗಳು ಪೂರ್ಣಗೊಳ್ಳದೆ ಅರ್ಧಕ್ಕೆ ನಿಂತಿದ್ದರೂ ಸಹ ಅವುಗಳ ಗುಣಮಟ್ಟ ಅಳೆಯದೇ ಪೂರ್ಣ ಹಣ ಪಾವತಿ ಮಾಡಿದ್ದು, ಆಲಮ್ ಕ್ಲೋರಿನ್ ಮತ್ತು ಪ್ರಾಧಿಕಾರಕ್ಕೆ ಅವಶ್ಯಕತೆಗಿಂತ ಹೆಚ್ಚಾಗಿ ವಾಟರ್ ಮೀಟರ್ ಖರೀದಿಯಲ್ಲಿ ಅವ್ಯವಹಾರ ಎಸಗಿ ಕರ್ನಾಟಕ ಪಾರದರ್ಶಕ ನಿಯಮಗಳನ್ನು ಪಾಲಿಸದೆ ಸರ್ಕಾರದ ಹಣವನ್ನು ದುರುಪಯೋಗಪಡಿಸಿರುವ ಆರೋಪಗಳಿಗಾಗಿ ಶ್ರೀ ಬಿ.ಸಿ. ಮುಧೋಳ್ ಇವರಿಗೆ ಮೇಲೆ (1)ರಲ್ಲಿ ಓದಲಾದ ದಿನಾಂಕ:8.8.05ರ ನೋಟೀಸನ್ನು ಜಾರಿ ಮಾಡಿ ಸಮಜಾಯಿಸಿ ಕೇಳುವ ಮೂಲಕ ಅವರ ವಿರುದ್ಧ ಇಲಾಖಾ ವಿಚಾರಣೆಯನ್ನು ಪ್ರಾರಂಭಿಸಲಾಯಿತು. ನೋಟೀಸಿಗೆ ಮೇಲೆ (2) ರಲ್ಲಿ ಓದಲಾದ ದಿನಾಂಕ:30.9.05ರ ಉತ್ತರ ಸಲ್ಲಿಸಿದ ಆರೋಪಿತ ಅಧಿಕಾರಿ/ನೌಕರರು ತಮ್ಮ ಮೇಲೆ ಹೊರಿಸಲಾದ ದೋಷಾರೋಪಣೆಯನ್ನು ನಿರಾಕರಿಸಿರುತ್ತಾರೆ. ಆದ್ದರಿಂದ ಆರೋಪದಲ್ಲಿನ ಸತ್ಯಾಸತ್ಯತೆಯನ್ನು ವಿಚಾರಣೆ ಮೂಲಕ ತಿಳಿಯುವ ದೃಷ್ಟಿಯಿಂದ ವಿಚಾರಣೆಯನ್ನು ಮುಂದುವರಿಸಲು ಸರ್ಕಾರವು ತೀರ್ಮಾನಿಸಿ ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರದ ಆದೇಶ ಸಂಖ್ಯೆ:ಸಿಆಸುಇ 51 ಎಸ್‌ಇಎನ್ 05, ಬೆಂಗಳೂರು, ದಿನಾಂಕ: 18ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಲ್ಪಟ್ಟ ಸಂದರ್ಭಗಳಿಂದಾಗಿ ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(2) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಪಿ. ಗೋಪಾಲಕೃಷ್ಣ, ನಿವೃತ್ತ ಜಿಲ್ಲಾ ನ್ಯಾಯಾಧೀಶರು, ಇವರನ್ನು ವಿಚಾರಣಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ಈ ವಿಚಾರಣೆಗಾಗಿ ಅವರು ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 16 ಸೇಇವಿ 05 ದಿನಾಂಕ:23.08.05 ರಂತೆ ರೂ.6000/- ಗೌರವಧನ ಹಾಗೂ ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 45 ಸೇಇವಿ 2001 ದಿನಾಂಕ: 4.3.2002 ರಂತೆ ರೂ.1000/- ವಾಹನ ಭತ್ಯೆಯನ್ನು ಪಡೆಯುತ್ತಾರೆ.

ಶಿಸ್ತು ಪ್ರಾಧಿಕಾರಿಯ ಪರವಾಗಿ ಪ್ರಕರಣವನ್ನು ವಿಚಾರಣಾಧಿಕಾರಿಯವರ ಮುಂದೆ ಮಂಡಿಸಲು ಕರ್ನಾಟಕ ನಾಗರೀಕ ಸೇವಾ (ವರ್ಗೀಕರಣ, ನಿಯಂತ್ರಣ ಮತ್ತು ಮೇಲ್ಮನವಿ) ನಿಯಮಾವಳಿ 1957ರ ನಿಯಮ 11(5) ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀಮತಿ ಹೇಮಲತ, ಜನರಲ್ ಮ್ಯಾನೇಜರ್, ಆರ್ ಅಂಡ್ ಆರ್, ಅಪ್ಪರ್ ಕೃಷ್ಣ ಪ್ರಾಜೆಕ್ಟ್, ಬಾಗಲಕೋಟೆ ಇವರನ್ನು ಮಂಡನಾಧಿಕಾರಿಯನ್ನಾಗಿ ಈ ಮೂಲಕ ನೇಮಿಸುತ್ತದೆ. ವಿಚಾರಣಾಧಿಕಾರಿಗಳಿಗೆ ಸ್ಥಳಾವಕಾಶ, ಶೀಘ್ರಲಿಪಿಗಾರರ ಸೇವೆ ಇತ್ಯಾದಿಗಳನ್ನು ಒದಗಿಸಲು ಉಪ ಕಾರ್ಯದರ್ಶಿ, ಕಂದಾಯ ಇಲಾಖೆ (ಭೂಸ್ವಾಧೀನ ಮತ್ತು ಪುನರ್‌ವಸತಿ) ಇವರು ಕ್ರಮ ಕೈಗೊಳ್ಳುತ್ತಾರೆ. ವಿಚಾರಣೆಯನ್ನು 3 ತಿಂಗಳೊಳಗಾಗಿ ಮುಕ್ತಾಯಗೊಳಿಸಿ ವರದಿ ಸಲ್ಲಿಸುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ರಘುರಾಮ್ ಭಂಡಾರಿ**

ಪಿ.ಆರ್. 331

ಸರ್ಕಾರದ ಅಧೀನ ಕಾರ್ಯದರ್ಶಿ,

ಸಿಬ್ಬಂದಿ ಮತ್ತು ಆಡಳಿತ ಸುಧಾರಣಾ ಇಲಾಖೆ, (ಸೇವೆಗಳು-3)

## ಸಹಕಾರ ಸಚಿವಾಲಯ

**ವಿಷಯ:** ಕೃಷಿ ಮಾರಾಟ ಇಲಾಖೆಯ ಯೋಜನಾ ವಿಭಾಗದ ಹುದ್ದೆಗಳನ್ನು ಮುಂದುವರೆಸುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ: ಸಇ/252/ಮಾಇಸೇ/1993 ದಿನಾಂಕ:23.6.2000
2. ಸರ್ಕಾರದ ಆದೇಶ ಸಂಖ್ಯೆ: ಸಇ/124/ಮಾಇಸೇ/2004 ದಿನಾಂಕ:10.9.2004
3. ಆಯುಕ್ತರು, ಕೃಷಿ ಮಾರಾಟ ಇಲಾಖೆ, ಬೆಂಗಳೂರುರವರ ಪತ್ರ ಸಂಖ್ಯೆ: ಕೃಮಾಇ/126/ಸಿಬ್ಬಂದಿ-1(ಸಿ)/2005 ದಿನಾಂಕ: 23.8.2005.

**ಪ್ರಸ್ತಾವನೆ:**

ಕೃಷಿ ಮಾರಾಟ ಇಲಾಖೆಯ ಆಯುಕ್ತರು ದಿನಾಂಕ: 29.4.2005 ರ ತಮ್ಮ ಪ್ರಸ್ತಾವನೆಯನ್ನು ಕೃಷಿ ಮಾರಾಟ ಇಲಾಖೆಯ ಯೋಜನಾ ವಿಭಾಗಕ್ಕೆ ಮೇಲೆ ಕ್ರಮಾಂಕ (1) ರಲ್ಲಿ ಓದಲಾದ ದಿನಾಂಕ: 23.6.2000ರ ಆದೇಶಾನುಸಾರ ಕೃಷಿ ಮಾರಾಟ ಇಲಾಖೆಯ ಯೋಜನಾ ವಿಭಾಗಕ್ಕೆ 11

ಹುದ್ದೆಗಳನ್ನು ಸೃಜಿಸಲಾಗಿತ್ತು. ಸದರಿ ಹುದ್ದೆಗಳನ್ನು ವಿವಿಧ ಆದೇಶಗಳ ಮೂಲಕ ಕಾಲಕಾಲಕ್ಕೆ ತಾತ್ಕಾಲಿಕವಾಗಿ ಮುಂದುವರೆಸಲಾಗಿತ್ತು. ಮೇಲೆ ಓದಲಾದ (2) ರಲ್ಲಿನ ದಿನಾಂಕ:10.9.2004 ರ ಪತ್ರದಲ್ಲಿ ಸದರಿ ಹುದ್ದೆಗಳ ಅವಧಿಯು ದಿನಾಂಕ: 3.6.2004 ರಿಂದ 1 ವರ್ಷದ ಅವಧಿಗೆ ಮುಂದುವರೆಸಲಾಗಿತ್ತು. ಸದರಿ ಹುದ್ದೆಗಳನ್ನು ದಿನಾಂಕ: 23.6.2005 ರಿಂದ ಖಾಯಂಗೊಳಿಸಲು ಅಥವಾ ಖಾಯಂಗೊಳಿಸುವ ಪ್ರಕ್ರಿಯೆ ವಿಳಂಬವಾದಲ್ಲಿ ಪುನಃ 2 ವರ್ಷಗಳ ಅವಧಿಗೆ ಮುಂದುವರೆಸಲು ಪ್ರಸ್ತಾಪಿಸಿರುತ್ತಾರೆ.

ಅದ್ದರಿಂದ, ಪ್ರಸ್ತಾವನೆಯನ್ನು ನಿಯಮಗಳಾನುಸಾರ ಪರಿಶೀಲಿಸಿದ ಸರ್ಕಾರವು ಸದರಿ ಹುದ್ದೆಗಳನ್ನು ದಿನಾಂಕ:23.6.2005 ರಿಂದ 30.6.2006 ರವರೆವಿಗೆ ಮುಂದುವರೆಸುವುದು ಸೂಕ್ತವೆಂದು ಪರಿಗಣಿಸಿದೆ. ಆದುದರಿಂದ, ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಸಇ 263 ಮಾಇಸೇ 2005, ಬೆಂಗಳೂರು, ದಿನಾಂಕ: 13ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿದ ಕಾರಣಗಳಿಂದಾಗಿ, ಕೃಷಿ ಮಾರಾಟ ಇಲಾಖೆಯ ಯೋಜನಾ ವಿಭಾಗಕ್ಕೆ ಮಂಜೂರಾದ ಈ ಕೆಳಕಂಡ ಹುದ್ದೆಗಳನ್ನು ತಾತ್ಕಾಲಿಕವಾಗಿ ದಿನಾಂಕ:23.6.2005 ರಿಂದ 30.6.2006 ರವರೆವಿಗೆ ಮುಂದುವರೆಸಲು ಸರ್ಕಾರದ ಮಂಜೂರಾತಿ ನೀಡಲಾಗಿದೆ.

| ಕ್ರ. ಸಂ. | ಹುದ್ದೆಗಳ ಪದನಾಮ | ವೇತನ ಶ್ರೇಣಿ | ಹುದ್ದೆಗಳ ಸಂಖ್ಯೆ |
|---|---|---|---|
| 1 | ಜಂಟಿ ನಿರ್ದೇಶಕರು | 10620-14960 | 1 |
| 2 | ಅಧೀಕ್ಷಕರು | 5200-9580 | 1 |
| 3 | ಶೀಘ್ರಲಿಪಿಗಾರರು | 3850-7050 | 1 |
| 4 | ಪ್ರಥಮ ದರ್ಜೆ ಸಹಾಯಕರು | 3850-7050 | 2 |
| 5 | ದ್ವಿತೀಯ ದರ್ಜೆ ಸಹಾಯಕರು | 3000-5450 | 2 |
| 6 | ಬೆರಳಚ್ಚುಗಾರರು | 3000-5450 | 1 |
| 7 | ವಾಹನ ಚಾಲಕ | 3000-5450 | 1 |
| 8 | ಸಿಪಾಯಿ | 2500-3850 | 2 |
| | ಒಟ್ಟು | | 11 |

ಈ ಬಗ್ಗೆ ತಗಲುವ ವೆಚ್ಚವನ್ನು ಲೆಕ್ಕ ಶೀರ್ಷಿಕೆ-3475-ಇತರೆ ಸಾಮಾನ್ಯ ಆರ್ಥಿಕ ಸೇವೆಗಳು-107-ಮಾರುಕಟ್ಟೆ ವಿನಿಮಯ-01-ಮಾರುಕಟ್ಟೆ ಸಮಿತಿಗಳು (ಯೋಜನೇತರ)ರ ಅಡಿಯಲ್ಲಿ ಭರಿಸುವುದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಅನಧಿಕೃತ ಟಿಪ್ಪಣಿ ಸಂಖ್ಯೆ: ಸಇ 465 ಆಂಆಸ (ಎ) 05 ದಿನಾಂಕ: 1.2.2006 ಮತ್ತು ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ/01/ಟಿಎಫ್‌ಪಿ/96 ದಿನಾಂಕ: 10.7.1996 ರಲ್ಲಿ ಇಲಾಖಾ ಕಾರ್ಯದರ್ಶಿಗಳಿಗೆ ಆರ್ಥಿಕ ಇಲಾಖೆಯು ನೀಡಲಾಗಿರುವ ಆರ್ಥಿಕ ಪ್ರತ್ಯಾಧಿಕಾರದ ಮೇರೆಗೆ ಹೊರಡಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 332

**ಬಿ.ಎಸ್. ಜಾಪಾಲಿ**

ಸರ್ಕಾರದ ಅಧೀನ ಕಾರ್ಯದರ್ಶಿ, ಸಹಕಾರ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ:** ಶ್ರೀ ರಾಘವೇಂದ್ರ ಶಿಕ್ಷಕ ಮತ್ತು ಪೋಷಕರ ಸಂಘ, ಮಾಗಡಿ ರಸ್ತೆ, ಬೆಂಗಳೂರು ಈ ಸಂಸ್ಥೆಯನ್ನು ವಿಸರ್ಜಿಸಿ ಸಂಸ್ಥೆಯ ಚರ-ಸ್ಥಿರ ಆಸ್ತಿಯನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳುವ ಬಗ್ಗೆ.

**ಓದಲಾಗಿದೆ:**
1. ಜಿಲ್ಲಾ ನೋಂದಣಾಧಿಕಾರಿ, ಬೆಂಗಳೂರು ನಗರ ಜಿಲ್ಲೆ, ಇವರ ವರದಿ ಸಂಖ್ಯೆ:ವಾಲೇಪ 578/92-93, ದಿನಾಂಕ: 23.12.1995.
2. ಸರ್ಕಾರದ ಕಾರಣ ಕೇಳುವ ನೋಟೀಸು ಸಂಖ್ಯೆ:ಕಂಇ 7 ಮುನೊಸೊ 1996, ದಿನಾಂಕ:9.7.1996.
3. ಸಂಘದ ಲಿಖಿತ ಹೇಳಿಕೆಗಳು ದಿನಾಂಕ:20.7.96 ಹಾಗೂ 18.7.1996.
4. ಸರ್ಕಾರಿ ಆದೇಶ ಸಂಖ್ಯೆ:ಆರ್‌ಡಿ 7 ಮುನೊಸೋ 96, ಬೆಂಗಳೂರು, ದಿನಾಂಕ:13.9.1996.
5. ಆಡಳಿತಾಧಿಕಾರಿಗಳು, ಶ್ರೀ ರಾಘವೇಂದ್ರ ಶಿಕ್ಷಕ ಮತ್ತು ಪೋಷಕರ ಸಂಘ ಇವರ ವರದಿ ಸಂಖ್ಯೆ: ಅ.ಸ.ಸ. 4/97-98, ದಿನಾಂಕ: 19.2.1997.
6. ಜಿಲ್ಲಾ ನೋಂದಣಾಧಿಕಾರಿಗಳು, ಬೆಂಗಳೂರು ನಗರ ಜಿಲ್ಲೆ, ಅವರ ವರದಿ ವಾಲೇಪ 578/92-93, ದಿನಾಂಕ: 11.8.1997.
7. ಸರ್ಕಾರದ ನಡವಳಿಗಳ ಸಂಖ್ಯೆ:ಆರ್‌ಡಿ 44 ಮುನೊಸೊ 03, ದಿನಾಂಕ: 25.12.2006.

**ಪ್ರಸ್ತಾವನೆ:**

ಶ್ರೀ ರಾಘವೇಂದ್ರ ಶಿಕ್ಷಕ ಮತ್ತು ಪೋಷಕರ ಸಂಘ, ಈ ಸಂಸ್ಥೆಯು ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಪ್ರಕಾರ ಸಂಖ್ಯೆ 409, 79-80ರಲ್ಲಿ ದಿನಾಂಕ:26.11.1979 ರಂದು ನೋಂದಾಯಿಸಿದೆ. ಸಂಸ್ಥೆಯು ದಿನಾಂಕ:31.12.1987ರ ವರೆಗಿನ ಸಂಸ್ಥೆಯ ಲೆಕ್ಕಪತ್ರಗಳನ್ನು ಜಿಲ್ಲಾ ನೋಂದಣಾಧಿಕಾರಿಗಳಿಗೆ ಸಲ್ಲಿಸಲಾಗಿದ್ದು, ತದನಂತರ ಸಂಸ್ಥೆಯಲ್ಲಿ ಎರಡು ಬಣಗಳಾಗಿ, ಎರಡೂ ಬಣಗಳು ಸುಳ್ಳು ಲೆಕ್ಕಪತ್ರಗಳನ್ನು ಜಿಲ್ಲಾ ನೋಂದಣಾಧಿಕಾರಿಗಳಿಗೆ ಸಲ್ಲಿಸಿ ನೋಂದಾಯಿಸಲು ಕೋರಿದ್ದಾರೆ. ಸಂಘದ ಕಾರ್ಯಕಾರಿ ಸಮಿತಿ ಸದಸ್ಯರೆಂದು ಹೇಳಿಕೊಳ್ಳುವ ಸದಸ್ಯರುಗಳು ಕಾನೂನು ಬದ್ಧವಾಗಿ ರಚಿತವಾಗಿ ಸಂಘದ ಸದಸ್ಯರಲ್ಲವೆಂದು ತಿಳಿದು ಬಂದ ನಂತರ ಸಂಘದ ಹಿತರಕ್ಷಣೆಯನ್ನು ಕಾಪಾಡಲು ಓದಲಾದ-1ರಲ್ಲಿ ಜಿಲ್ಲಾ ನೋಂದಣಾಧಿಕಾರಿಗಳು, ಸದರಿ ಸಂಘಕ್ಕೆ ಆಡಳಿತಾಧಿಕಾರಿ ನೇಮಕ ಮಾಡುವ ಕುರಿತು ಶಿಫಾರಸ್ಸು ಮಾಡಿ ವರದಿ ಸಲ್ಲಿಸಿದ್ದನ್ನು ಸರ್ಕಾರವು ಪರಿಶೀಲಿಸಿ ಓದಲಾದ-2ರ ಪ್ರಕಾರ ದಿನಾಂಕ:9.7.1996 ರಂದು ಕಾರಣ ಕೇಳುವ ನೋಟೀಸ್ ಜಾರಿ ಮಾಡಿ ಓದಲಾದ-3ರ ಪ್ರಕಾರ ಸಂಘದಿಂದ ಲಿಖಿತ ಹೇಳಿಕೆಗಳನ್ನು ಪಡೆದು ಪರಿಶೀಲಿಸಲಾಗಿ ಭಿನ್ನಾಭಿಪ್ರಾಯಗಳು ಇರುವುದು ಹಾಗೂ ಸಂಘದ ಲಿಖಿತ ಹೇಳಿಕೆಗಳು ಸಮಂಜಸವಾಗಿರದೇ ಇದ್ದು, ಸಂಘದ ದೈನಂದಿನ ಚಟುವಟಿಕೆಗಳಿಗೆ ತೊಂದರೆಯಾಗುತ್ತಿದ್ದುದು ಕಂಡು ಬಂದುದರಿಂದ ಸಾರ್ವಜನಿಕ ಹಿತದೃಷ್ಟಿಯಿಂದ ಓದಲಾದ-4ರ ಪ್ರಕಾರ

ಆಡಳಿತಾಧಿಕಾರಿಯನ್ನು ನೇಮಕ ಮಾಡಲಾಯಿತು. ತದನಂತರ ಕಾಲಕಾಲಕ್ಕೆ ಆಡಳಿತಾಧಿಕಾರಿಯ ಅವಧಿಯನ್ನು ವಿಸ್ತರಿಸಿಕೊಂಡು ಬರಲಾಗಿದ್ದು, ಆಡಳಿತಾಧಿಕಾರಿಯು ಸಂಘವನ್ನು ಸುಸ್ಥಿತಿಗೆ ತರುವಲ್ಲಿ ಸಂಘದ ಸರ್ವ ಸದಸ್ಯರ ಸಭೆ ಕರೆಯಲು, ಚುನಾವಣೆ ನಡೆಸಲು, ಲೆಕ್ಕಪತ್ರ ತಪಾಸಣೆ ನಡೆಸಲು ಹಲವು ಬಾರಿ ಪ್ರಯತ್ನ ಮಾಡಿದ್ದಾರೆ. ಸಂಘಕ್ಕೆ ಸದಸ್ಯರೇ ಇಲ್ಲದಿರುವಾಗ ಚುನಾವಣೆ ನಡೆಸಲು ಸಾಧ್ಯವಾಗಿರುವುದಿಲ್ಲವೆಂದು ಸದರಿ ಸಂಘದ ಅಡಿಯಲ್ಲಿ ನಡೆಯುತ್ತಿರುವ ಶ್ರೀ ರಾಘವೇಂದ್ರ ಶಿಕ್ಷಕ ಮತ್ತು ಪೋಷಕ ಶಿಶುವಿಹಾರ ಮತ್ತು ಪ್ರಾಥಮಿಕ ಶಾಲೆಯಲ್ಲಿ ಓದುತ್ತಿರುವ ಬಡ ವಿದ್ಯಾರ್ಥಿಗಳ ಹಿತದೃಷ್ಟಿಯಿಂದ ಶಾಲೆಯನ್ನು ಸರ್ಕಾರದ ವಶಕ್ಕೆ ತೆಗೆದುಕೊಳ್ಳುವುದು ಉಚಿತವೆಂದು ವರದಿ ನೀಡಿದ್ದಾರೆ. ಜಿಲ್ಲಾ ನೋಂದಣಾಧಿಕಾರಿಗಳು ಸಹ ಇದೇ ಅಭಿಪ್ರಾಯವನ್ನು ನೀಡಿದ್ದು, ಮೇಲೆ ತಿಳಿಸಿದ ವಿವಿಧ ವರದಿಗಳ ಆಧಾರದ ಮೇಲೆ ಸಂಘವನ್ನು ಮುಂದುವರಿಸುವುದು ಸಾರ್ವಜನಿಕ ಹಿತದೃಷ್ಟಿಯಿಂದ ಸಮಂಜಸವಲ್ಲವಾದ್ದರಿಂದ ಸಂಘದ ಚರ-ಸ್ಥಿರ ಆಸ್ತಿಗಳನ್ನು ಸರ್ಕಾರವು ಸ್ವಾಧೀನಪಡಿಸಿಕೊಳ್ಳುವುದು ಸೂಕ್ತವೆಂದು ಹಾಗೂ ಸಂಘದ ಅಧೀನದಲ್ಲಿರುವ ಶಿಶುವಿಹಾರ ಮತ್ತು ಪ್ರಾಥಮಿಕ ಶಾಲೆಯಲ್ಲಿ ಓದುತ್ತಿರುವ ಮಕ್ಕಳನ್ನು ಪಕ್ಕದಲ್ಲಿರುವ ಸರ್ಕಾರಿ ಶಾಲೆಯಲ್ಲಿ ಸ್ಥಳಾಂತರಿಸಲು ಹಾಗೂ ಸದರಿ ಶಾಲೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶಿಕ್ಷಕರನ್ನು ಇತರ ಶಾಲೆಗಳಿಗೆ ಸ್ಥಳಾಂತರಿಸಲು ಕಾನೂನು ಚೌಕಟ್ಟಿನಲ್ಲಿ ತಕ್ಷಣವೇ ಕ್ರಮ ಕೈಗೊಳ್ಳಲು ಶಿಕ್ಷಣ ಇಲಾಖೆಯನ್ನು ಓದಲಾದ-7ರ ಪ್ರಕಾರ ಕೋರಿದೆ. ಸದರಿ ಸಂಘವನ್ನು ವಿಸರ್ಜಿಸಲು ಸರ್ಕಾರವು ತೀರ್ಮಾನಿಸಿದ್ದು ಅದರಂತೆ ಈ ಕೆಳಕಂಡ ಆದೇಶ.

**ಸರ್ಕಾರಿ ಆದೇಶ ಸಂಖ್ಯೆ: ಕಂಇ 44 ಮುನೊಸೊ 2003, ಬೆಂಗಳೂರು, ದಿನಾಂಕ: 2ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನೆಲೆಯಲ್ಲಿ ಕರ್ನಾಟಕ ಸಂಘಗಳ ನೋಂದಣಿ ಕಾಯ್ದೆ 1960ರ ಕಲಂ 27-ಎ ಮತ್ತು ಉಪ ಕಲಂ 5 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ರಾಘವೇಂದ್ರ ಶಿಕ್ಷಕ ಮತ್ತು ಪೋಷಕರ ಸಂಘ, ಮಾಗಡಿ ರಸ್ತೆ, ಬೆಂಗಳೂರು ಎಂಬ ನೋಂದಾಯಿತ ಸಂಘವನ್ನು ವಿಂಘಟಿಸಿ (ವಿಸರ್ಜಿಸಿ) ಆದೇಶಿಸಿದೆ. ಮತ್ತು ಇದೇ ಕಾಯ್ದೆಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ರಾಘವೇಂದ್ರ ಶಿಕ್ಷಕ ಮತ್ತು ಪೋಷಕರ ಸಂಘ, ಮಾಗಡಿ ರಸ್ತೆ, ಬೆಂಗಳೂರು ಈ ಸಂಸ್ಥೆಯ ಎಲ್ಲಾ ಚರ-ಸ್ಥಿರ ಆಸ್ತಿಗಳು ಯಾವುದೇ ಸ್ಥಳದಲ್ಲಿದ್ದರೂ ಮತ್ತು ಯಾರದೇ ಹೆಸರಿನಲ್ಲಿದ್ದರೂ ಅವುಗಳನ್ನು ಸಂಘದ ಹೊಣೆಗಾರಿಕೆಯೊಂದಿಗೆ ಸ್ವಾಧೀನಪಡಿಸಿಕೊಳ್ಳಲಾಗಿದೆ. ಜಿಲ್ಲಾಧಿಕಾರಿಗಳು, ಬೆಂಗಳೂರು ಇವರು ಎಲ್ಲ ಚರ-ಸ್ಥಿರ ಆಸ್ತಿಗಳನ್ನು ವಶಪಡಿಸಿಕೊಳ್ಳಲು ಆದೇಶಿಸಿದೆ.

ಶಿಕ್ಷಣ ಇಲಾಖೆಯು ಶ್ರೀ ರಾಘವೇಂದ್ರ ಶಿಕ್ಷಕ ಮತ್ತು ಪೋಷಕರ ಸಂಘದ ಆಶ್ರಯದಲ್ಲಿ ನಡೆಯುತ್ತಿರುವ ಶಾಲೆಗಳಲ್ಲಿ ಪ್ರಸ್ತುತ ಇರುವ ವಿದ್ಯಾರ್ಥಿಗಳ ವ್ಯಾಸಂಗವು ಮುಂದುವರಿಸಲು ಪಕ್ಕದಲ್ಲಿರುವ ಸರ್ಕಾರಿ ಶಾಲೆಗಳಿಗೆ ಸ್ಥಳಾಂತರಿಸಲು ಹಾಗೂ ಸದರಿ ಶಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಶಿಕ್ಷಕರನ್ನು ಇತರೇ ಶಾಲೆಗಳಿಗೆ ಸ್ಥಳಾಂತರಿಸುವಂತೆ ಕ್ರಮ ಕೈಗೊಳ್ಳಲು ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

ಪಿ.ಆರ್. 334

**ಶಿವಲಿಂಗ**

ಪೀಠಾಧಿಕಾರಿ, ಕಂದಾಯ ಇಲಾಖೆ, (ನೋಂದಣಿ ಮತ್ತು ಮುದ್ರಾಂಕ)

## ಸಮಾಜ ಕಲ್ಯಾಣ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಸಕಇ 223 ಬಿಸಿಎ 2005(ಭಾಗ) ಬೆಂಗಳೂರು, ದಿನಾಂಕ: 17ನೇ ಫೆಬ್ರವರಿ 2006**

ಸರ್ಕಾರದ ಆದೇಶ ಸಂಖ್ಯೆ:ಸಕಇ 223 ಬಿಸಿಎ 2005, ದಿನಾಂಕ:29.10.2005 ಅನುಬಂಧ-I ರಲ್ಲಿ ಎ ವಿಭಾಗದಲ್ಲಿನ ಕ್ರಮಸಂಖ್ಯೆ 8, ಬಿ ವಿಭಾಗದಲ್ಲಿನ ಕ್ರಮಸಂಖ್ಯೆ 5 ಮತ್ತು 7,ಸಿ ವಿಭಾಗದಲ್ಲಿನ ಕ್ರಮಸಂಖ್ಯೆ 4 ಮತ್ತು 5ನ್ನು ಈ ಕೆಳಕಂಡಂತೆ ಓದಿಕೊಳ್ಳುವುದು.

**ಅನುಬಂಧ-I**

| ವಿಷಯದ ಉಲ್ಲೇಖ | ಪ್ರಸ್ತುತವಾಗಿ ನಮೂದಿಸುವುದು | ಓದಿಕೊಳ್ಳುವುದು |
|---|---|---|
| (A) DIST-Rural ಕ್ರ.ಸಂ. (8) | Revenue Inspectors, Secretaries of Gram Panchayat, High School/ Higher Primary School Teachers &Officials of Other Departments. | Revenue Inpectors, Secretaries of Gram Panchayat, High School teacher/ Higher Primary School Head Master & Officials of Other Departments. |
| (B) CMC,TMC and TOWN PANCHAYATH ಕ್ರ.ಸಂ. (5) | Enumerators (in charge of 2 En-block with 175 to 200 house holds) | Enumerators (in charge of En-block with 175 to 200 house holds) |
| ಕ್ರ.ಸಂ. (7) | An official working in the cadre of Offici Superintendent in equal of the Commissioner of CMC | An official working in the cadre of Office Superintendent in office of the Commissioner CMC |
| (C) CITY Corporation ಕ್ರ.ಸಂ. (4) | Assistant Engineer, Medical officer and Asst. Revenue Officer or any other officer working in equivalent cadre | Assistant Executive Engineer, Medical Officer and Asst. Revenue Officer or any Other Officer working in equivalent Cadre |
| ಕ್ರ.ಸಂ. (5) | Assistant Engineer, Medical Officer and Asst. Revenue officer or any other Officer working in equivalent cadre. | ಕ್ರ.ಸಂ. 3 ರಡಿಯಲ್ಲಿ Addl city survey officer ನ್ನು ನೇಮಿಸ್ಪಟ್ಟಿದೆ. |

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಬಿ. ರಾಮಸ್ವಾಮಿ**

ಪಿ.ಆರ್. 335

ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರಭಾರ),
ಸಮಾಜ ಕಲ್ಯಾಣ ಇಲಾಖೆ

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ:** ಸುವರ್ಣ ಕರ್ನಾಟಕ ಆಚರಣೆಗೆ ಪ್ರಮುಖ ರಾಜಮನೆತನಗಳಿಗೆ ಸೇರಿದ ಪ್ರಾಚೀನ ಸ್ಮಾರಕಗಳ ಸಂರಕ್ಷಣೆ- ಅನುದಾನ ಬಿಡುಗಡೆ ಬಗ್ಗೆ

**ಓದಲಾಗಿದೆ:** ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮೈಸೂರು ಇವರ ಪತ್ರ ಸಂ:ಡಿಎಎಂ:ಸಂ.ವಿ:ಮೈಸೂರು:ಸು.ಕ. 2005-06 ದಿ:22.10.2005 ಮತ್ತು ದಿ:22.11.2005

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯದ ನಿರ್ದೇಶಕರು ಪ್ರಸ್ತಾವನೆಯನ್ನು ಕಳುಹಿಸಿರುತ್ತಾರೆ. ರಾಜ್ಯದಲ್ಲಿ ಸುವರ್ಣ ಕರ್ನಾಟಕ ಕಾರ್ಯಕ್ರಮದ ಅಡಿಯಲ್ಲಿ ಇಲಾಖಾ ವತಿಯಿಮದ ತೆಗೆದುಕೊಳ್ಳಬಹುದಾದ ಪ್ರಾಚೀನ ರಾಜಮನೆತನಗಳಿಗೆ ಸೇರಿದ ಪ್ರಮುಖ ಸ್ಮಾರಕಗಳನ್ನು ರಕ್ಷಿಸುವ ನಿಟ್ಟಿನಲ್ಲಿ ದಿನಾಂಕ:27.9.2005 ರಂದು ತಜ್ಞರ ಸಮಿತಿ ಸಭೆಯನ್ನು ನಡೆಸಿರುತ್ತಾರೆ. ಸದರಿ ಸಭೆಯಲ್ಲಿ ಹಾಜರಾಗಿದ್ದ ತಜ್ಞರ ಅಭಿಪ್ರಾಯದ ಹಿನ್ನೆಲೆಯಲ್ಲಿ 29 ಪ್ರಾಚೀನ ಸ್ಮಾರಕಗಳ ರಕ್ಷಣೆಗಾಗಿ ಬೇಕಾಗುವ ಮೊತ್ತ ರೂ.5.00 ಕೋಟಿಗಳ ಯೋಜನೆಯನ್ನು ತಯಾರಿಸಿ ಕಳುಹಿಸಿರುತ್ತಾರೆ. ಈ 29 ಸ್ಮಾರಕಗಳ ಸಂರಕ್ಷಣೆಗೆ 5.00 ಕೋಟಿ ರೂಪಾಯಿಗಳನ್ನು 2005-06ನೇ ಸಾಲಿನಲ್ಲಿ ಸುವರ್ಣ ಕರ್ನಾಟಕ ಕಾರ್ಯಕ್ರಮಗಳ ಪೂರ್ವಸಿದ್ಧತೆಗೆ ಒದಗಿಸಲಾದ ರೂ.10.00 ಕೋಟಿ ಮೊತ್ತದಲ್ಲಿ ಬಿಡುಗಡೆ ಮಾಡಬೇಕೆಂದು ಒಂದು ವೇಳೆ ಸಾಧ್ಯವಾಗದಿದ್ದಲ್ಲಿ ಈ ವರ್ಷ ಕನಿಷ್ಠ 2.50 ಕೋಟಿ ರೂಪಾಯಿಗಳನ್ನಾದರೂ ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆ.

ಈ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ಈ ಕೆಳಗಿನಂತೆ ಆದೇಶಿಸಲಾಗಿದೆ.

### ಸರ್ಕಾರದ ಆದೇಶ ಸಂಖ್ಯೆ: ಸಂಕಇ 109 ಕರಅ 2005, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2006

ಪ್ರಸ್ತಾವನೆಯಲ್ಲಿ ವಿವರಿಸಿದ ಅಂಶಗಳ ಹಿನ್ನಲೆಯಲ್ಲಿ ಪ್ರಥಮವಾಗಿ ಪ್ರಸ್ತಾಪಿಸಿರುವ ರಾಜಮನೆತನದ 10 ಸ್ಮಾರಕಗಳನ್ನು ಸಂರಕ್ಷಿಸುವ ಸಲುವಾಗಿ ಪ್ರಸಕ್ತ ಸಾಲಿನಲ್ಲಿ ಸುವರ್ಣ ಕರ್ನಾಟಕ ಲೆಕ್ಕಶೀರ್ಷಿಕೆ 2205-00-102-4-09-059 (ಯೋಜನೆ) ಅಡಿಯಲ್ಲಿ ಕಲ್ಪಿಸಿರುವ ರೂ.10.00 ಕೋಟಿಗಳಲ್ಲಿ ರೂ.50.00 ಲಕ್ಷ (ಐವತ್ತು ಲಕ್ಷ ರೂಪಾಯಿಗಳು ಮಾತ್ರ)ಗಳನ್ನು ನಿರ್ದೇಶಕರು, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ ಮೈಸೂರು ರವರಿಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

1. ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕಾಗಿ ವಿನಿಯೋಗಿಸತಕ್ಕದ್ದು
2. ಸರ್ಕಾರ ಮಂಜೂರು ಮಾಡಿದ ಹಣಕ್ಕೆ ಲೆಕ್ಕಪರಿಶೋಧಕರಿಂದ ದೃಢೀಕರಿಸಿದ ಲೆಕ್ಕ ಪಟ್ಟಿ ಹಾಗೂ ಹಣ ವಿನಿಯೋಗ ಪ್ರಮಾಣ ಪತ್ರವನ್ನು ಸಲ್ಲಿಸುವುದು.
3. ಮೂರು ತಿಂಗಳೊಳಗಾಗಿ ಅನುಸರಣಾ ವರದಿ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸುವುದು.
4. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ನಿಯಮಗಳು 2000 ಮತ್ತು ಸರ್ಕಾರದಿಂದ ಆಗಿಂದಾಗ್ಗೆ ಹೊರಡಿಸಿದ ಸುತ್ತೋಲೆಗಳಲ್ಲಿನ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ವೆಚ್ಚವನ್ನು ಸುವರ್ಣ ಕರ್ನಾಟಕ ಲೆಕ್ಕಶೀರ್ಷಿಕೆ 2205-00-102-4-059 (ಯೋಜನೆ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ: ಆಇ 2316 ವೆಚ್ಚ-5/2005, ದಿನಾಂಕ: 8.2.2006 ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಫ್.ಆರ್. ಸಂಬರಗಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಪಿ.ಆರ್. 336

**ವಿಷಯ:** ಕನ್ನಡ ಭವನದ ಚಾಲುಕ್ಯ ವಿಭಾಗದ ಚಿತ್ರಕಲಾ ಗ್ಯಾಲರಿಗೆ ಆಧುನಿಕ ಬೆಳಕಿನ ವ್ಯವಸ್ಥೆಯನ್ನು ಸಜ್ಜುಗೊಳಿಸಲು ಹಣ ಮಂಜೂರಾತಿ ಬಗ್ಗೆ

**ಓದಲಾಗಿದೆ:** ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯರವರ ಪತ್ರ ಸಂಖ್ಯೆ:ಕಸನಿ:ಸು.ಚಿ:99:2005-06 ದಿನಾಂಕ 24.11.2005.

**ಪ್ರಸ್ತಾವನೆ:**

ಓದಲಾದ ಪತ್ರದಲ್ಲಿ ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇವರು ಕನ್ನಡ ಭವನದ ಚಾಲುಕ್ಯ ವಿಭಾಗದಲ್ಲಿ ಚಿತ್ರಕಲಾ ಗ್ಯಾಲರಿಗೆ ಅವಕಾಶ ಕಲ್ಪಿಸಲಾಗಿದ್ದು, ಈ ಚಿತ್ರಶಾಲೆಯನ್ನು ಆಧುನಿಕ ಬೆಳಕಿನ ವ್ಯವಸ್ಥೆಯೊಂದಿಗೆ ಸಜ್ಜುಗೊಳಿಸಿ ಈ ಚಿತ್ರಕಲಾ ಗ್ಯಾಲರಿಗೆ "ಸುವರ್ಣ ಕರ್ನಾಟಕ ಚಿತ್ರಕಲಾ ಗ್ಯಾಲರಿ" ಯೆಂದು ನಾಮಕರಣ ಮಾಡಲು ನಿರ್ಧರಿಸಿ, ಉದ್ದೇಶಿತ ಚಿತ್ರಕಲಾ ಗ್ಯಾಲರಿಗೆ ಆಧುನಿಕ ಲೈಟ್‌ಗಳನ್ನು ಸಜ್ಜುಗೊಳಿಸಲು ತಗಲುವ ಅಂದಾಜು ವೆಚ್ಚವನ್ನು ನೀಡುವಂತೆ ಸಹಾಯಕ ಕಾರ್ಯಪಾಲಕ ಇಂಜಿನಿಯರ್, ನಂ.10. ಕಟ್ಟಡಗಳ ವಿದ್ಯುತ್ ವಿಭಾಗ, ಬೆಂಗಳೂರು. ಇವರನ್ನು ಕೋರಲಾಗಿದ್ದು, ಸದರಿಯವರು ಕನ್ನಡ ಭವನ ಚಾಲುಕ್ಯ ವಿಭಾಗದ ಕಲಾ ವಿಭಾಗಕ್ಕೆ ಟ್ರ್ಯಾಕ್ ಸ್ಪಾಟ್ ದೀಪಗಳನ್ನು ಒದಗಿಸಿ ಅಳವಡಿಸುವ ಕಾಮಗಾರಿಗೆ ಅಂದಾಜು ವೆಚ್ಚ ರೂ.2.44 ಲಕ್ಷಗಳಿಗೆ ಸಲ್ಲಿಸಿ, ಠೇವಣಿ ರೂಪದಲ್ಲಿ ಕಾರ್ಯಪಾಲಕ ಅಭಿಯಂತರರು, ನಂ. 2, ಕಟ್ಟಡಗಳ ವಿಭಾಗ, ಲೋಕೋಪಯೋಗಿ ಇಲಾಖೆ, ಬೆಂಗಳೂರು, ಇವರಿಗೆ ಬಿಡುಗಡೆ ಮಾಡುವಂತೆ ಕೋರಿದ್ದಾರೆ. ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಗಿನಂತೆ ಆದೇಶ ನೀಡಿದೆ.

### ಸರ್ಕಾರದ ಆದೇಶ ಸಂಖ್ಯೆ: ಸಂಕಇ 168 ಕರಅ 2005, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2006

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ, ಕನ್ನಡ ಭವನದ ಚಲುಕ್ಯ ವಿಭಾಗದಲ್ಲಿಯ ಚಿತ್ರಕಲಾ ಗ್ಯಾಲರಿಗೆ ಆಧುನಿಕ ಲೈಟ್‌ಗಳನ್ನು ಸಜ್ಜುಗೊಳಿಸಲು ರೂ. 2.44 ಲಕ್ಷ (ರೂ.ಎರಡು ಲಕ್ಷ ನಲವತ್ತ ನಾಲ್ಕು ಸಾವಿರಗಳು ಮಾತ್ರ) ಗಳನ್ನು ಕಾರ್ಯಪಾಲಕ ಅಭಿಯಂತರರು, ನಂ., ಕಟ್ಟಡ ವಿಭಾಗ,ಬೆಂಗಳೂರು, ಇವರಿಗೆ ಠೇವಣಿ ರೂಪದಲ್ಲಿ ಕೊಡಲು ನಿರ್ದೇಶಕರು, ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ ಇವರಿಗೆ ಈ ಕೆಳಕಂಡ ಷರತ್ತುಗೊಳಪಟ್ಟು ಬಿಡುಗಡೆಗೊಳಿಸಲಾಗಿದೆ ಹಾಗೂ ಈ ಚಿತ್ರಕಲಾ ಗ್ಯಾಲರಿಗೆ "ಸುವರ್ಣ ಕರ್ನಾಟಕ ಚಿತ್ರಕಲಾ ಗ್ಯಾಲರಿ"ಯೆಂದು ನಾಮಕರಣ ಮಾಡಲು ಸಹ ಆದೇಶಿಸಿದೆ.

1. ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕಾಗಿ ವಿನಿಯೋಗಿಸತಕ್ಕದ್ದು.
2. ಸರ್ಕಾರ ಮಂಜೂರು ಮಾಡಿದ ಹಣಕ್ಕೆ ಲೆಕ್ಕಪರಿಶೋಧಕರಿಂದ ದೃಢೀಕರಿಸಿದ ಲೆಕ್ಕ ಪಟ್ಟಿ ಹಾಗೂ ಹಣ ವಿನಿಯೋಗ ಪ್ರಮಾಣ ಪತ್ರವನ್ನು ಸಲ್ಲಿಸುವುದು.
3. ಮೂರು ತಿಂಗಳೊಳಗಾಗಿ ಅನುಸರಣಾ ವರದಿ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸುವುದು.
4. ಕರ್ನಾಟಕ ಸಾರ್ವಜನಿಕ ಸಂಗ್ರಹಣೆಗಳಲ್ಲಿ ಪಾರದರ್ಶಕತೆ ಅಧಿನಿಯಮ 1999 ರ ನಿಯಮಗಳು 2000 ಮತ್ತು ಸರ್ಕಾರದಿಂದ ಆಗಿಂದಾಗ್ಯೆ ಹೊರಡಿಸಿದ ಸುತ್ತೋಲೆಗಳಲ್ಲಿನ ಸೂಚನೆಗಳನ್ನು ಕಟ್ಟುನಿಟ್ಟಾಗಿ ಪಾಲಿಸತಕ್ಕದ್ದು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-102-4-059 (ಯೋಜನೆ) ಯಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆದೇಶ ಸಂಖ್ಯೆ ಎಫ್‌ಡಿ1 ಟಿಎಫ್‌ಪಿ 96 ದಿನಾಂಕ:10.7.96 ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಫ್.ಆರ್. ಸಂಬರಗಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ

ಪಿ.ಆರ್. 337

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಸಾಲಿನಲ್ಲಿ ಯೋಜನೇತರ ಲೆಕ್ಕ ಶೀರ್ಷಿಕೆಗಳಲ್ಲಿ ಕೊರತೆಯಿರುವ ಆಯವ್ಯಯವನ್ನು ಪುನರ್ವಿಯೋಗದ ಮೂಲಕ ಅಥವಾ ಹೆಚ್ಚುವರಿಯಾಗಿ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:** ಪತ್ರ ಸಂಖ್ಯೆ: ಆಯವ್ಯಯ 2 ಹಹಂ 17/2005-06 ದಿ:28.10.2005.

**ಪ್ರಸ್ತಾವನೆ:**

ಮುಖ್ಯಲೆಕ್ಕಾಧಿಕಾರಿಗಳು ಹಾಗೂ ಆಯುಕ್ತರ ಆರ್ಥಿಕ ಸಲಹೆಗಾರರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಅವರು ಮೇಲೆ ಓದಲಾದ ದಿನಾಂಕ:28.10.2005 ರ ತಮ್ಮ ಪ್ರಸ್ತಾವನೆಯಲ್ಲಿ ಸುಮಾರು 12 ವಾಹನಗಳ ಸಾರಿಗೆ ವೆಚ್ಚಕ್ಕಾಗಿ 2005-06ನೇ ಸಾಲಿನಲ್ಲಿ ಒದಗಿಸಲಾಗಿದ್ದ ರೂ.22.20 ಲಕ್ಷಗಳಲ್ಲಿ ಇಂಧನ ಹಾಗೂ ವಾಹನ ರಿಪೇರಿಗಾಗಿ ರೂ 13.10 ಲಕ್ಷಗಳು ಖರ್ಚಾಗಿದ್ದು ಉಳಿದ 9.00 ಲಕ್ಷ ಆಯವ್ಯಯಗಳಲ್ಲಿ ಸರ್ವಶಿಕ್ಷಾ ಅಭಿಯಾನ ಮರುಪಾವತಿ ಆಧಾರದ ಮೇಲೆ 2004-05ನೇ ಸಾಲಿನಲ್ಲಿ ಪಡೆದಿದ್ದ ರೂ.5.00 ಲಕ್ಷಗಳು ಹಿಂದಿರುಗಿಸಬೇಕಾಗಿರುವುದರಿಂದ ಹಾಗೂ ವರ್ಷಾಂತ್ಯದ ವರೆಗೆ ಇಂಧನ ಹಾಗೂ ದುರಸ್ಥಿ ವೆಚ್ಚಕ್ಕೆ ಆಯವ್ಯಯ ಸಾಲದೆ ಕೊರತೆಯುಂಟಾಗುತ್ತದೆ. ಕೊರತೆ ಆಯವ್ಯಯವನ್ನು ಪುನರ್ ವಿನಿಯೋಗ ಅಥವಾ ಹೆಚ್ಚುವರಿಯಾಗಿ ಒಟ್ಟು ರೂ.6.82 ಲಕ್ಷಗಳನ್ನು (ಯೋಜನೇತರ) ಲೆಕ್ಕ ಶೀರ್ಷಿಕೆಗಳಲ್ಲಿ ಬಿಡುಗಡೆಗೊಳಿಸುವಂತೆ 2005-06ನೇ ಸಾಲಿಗೆ ಸಾರ್ವಜನಿಕ ಶಿಕ್ಷಣ ಆಯುಕ್ತರ ಕಛೇರಿಗೆ ಸಂಬಂಧಿಸಿದಂತೆ ಲೆಕ್ಕ ಶೀರ್ಷಿಕೆ 2202-02-001-0-03-071 (ಯೋಜನೇತರ) ಅಡಿಯಲ್ಲಿ ಉಳಿತಾಯವಾಗುವ ಮೊತ್ತದಲ್ಲಿ ರೂ.6.82 ಲಕ್ಷಗಳನ್ನು ಮರುಹೊಂದಾಣಿಕೆಗೆ ಸರ್ಕಾರದ ಅನುಮೋದನೆ ಕೋರಿದ್ದಾರೆ. ಈ ಪ್ರಸ್ತಾವನೆಯನ್ನು ಪರಿಶೀಲಿಸಿ ಸರ್ಕಾರವು ಈ ಮುಂದಿನಂತೆ ಆದೇಶಿಸುತ್ತದೆ.

**ಸರ್ಕಾರಿ ಆದೇಶ ಸಂಖ್ಯೆ: ಇಡಿ 345 ಯೋಯೋಕಾ 2005, ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2006**

**(ಇಡಿ 17 ಸ್ಕೀಮರ (ಯೂನಿಕ್) 2006, ದಿನಾಂಕ: 28ನೇ ಫೆಬ್ರವರಿ 2006)**

**2005**-06 ನೇ ಸಾಲಿಗೆ ಸಾರ್ವಜನಿಕ ಶಿಕ್ಷಣ ಇಲಾಖೆ, ಆಯುಕ್ತರ ಕಛೇರಿಗೆ ಸಂಬಂಧಿಸಿದಂತೆ ಲೆಕ್ಕ ಶೀರ್ಷಿಕೆ 2202-02-001-0-03-071 (ಯೋಜನೇತರ) ಅಡಿಯಲ್ಲಿ ಉಳಿತಾಯವಾಗುವ ಮೊತ್ತ ರೂ.6.82 ಲಕ್ಷಗಳನ್ನು (ಆರು ಲಕ್ಷದ ಎಂಬತ್ತೆರಡು ಸಾವಿರ ರೂಪಾಯಿಗಳು ಮಾತ್ರ) ಈ ಕೆಳಕಂಡ ಲೆಕ್ಕ ಶೀರ್ಷಿಕೆಗಳಿಗೆ ಮರುಹೊಂದಾಣಿಕೆ ಮಾಡಿಕೊಳ್ಳಲು ಈ ಮೂಲಕ ಅನುಮೋದನೆ ನೀಡುತ್ತದೆ.

| | **ಲೆಕ್ಕ ಶೀರ್ಷಿಕೆ** | **ಮೊತ್ತ (ಲಕ್ಷರೂಗಳಲ್ಲಿ)** |
|---|---|---|
| 1. | 2202-02-001-0-03-195 (ಯೋಜನೇತರ) | ರೂ.5.00 |
| 2. | 2202-01-104-0-00-051 (ಯೋಜನೇತರ) | ರೂ.0.25 |
| 3. | 2202-01-104-0-00-052 (ಯೋಜನೇತರ) | ರೂ.0.17 |
| 4. | 2202-01-104-0-00-195 (ಯೋಜನೇತರ) | ರೂ.140 |
| | **ಒಟ್ಟು** | **ರೂ.6.82** |

ಈ ಆದೇಶವನ್ನು ಶಿಕ್ಷಣ ಇಲಾಖೆಯ ಆಂತರಿಕ ಆರ್ಥಿಕ ಸಲಹೆಗಾರರ ಅ.ಟಿ.ಸಂಖ್ಯೆ:ಇಡಿ 968 ಐಎಸ್ (ಬಿಎ) 2005, ದಿನಾಂಕ:31.01.2006 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ವಿಶೇಷಾಧಿಕಾರಿ ಹಾಗೂ ಪದನಿಮಿತ್ತ,

ಸರ್ಕಾರದ ಸಹ ಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ

**FORM 22A**
**(Article 309)**
**Education Dpartment or Office**
**Re-appropriation Statement to accompany all applications for sanction to expenditure not provided for the in budget, or for additional allotments**

| Major, Minor, Sub-and Detailed Heads of Budget (The same etails must be given as in the printed Budget Estimate) | Heads of estimate roposed to be increased | | | | Heads of estimate proposed to be reduced | | | | Remarks: (Here state fully the reasons for allotment and for anicipating savings |
|---|---|---|---|---|---|---|---|---|---|
| | Amount as in the san-ctioned Budget estimate | Actual pendit ure up-to-date viz. | Probable expen-diture during remain-der of the year | Amount of addi-tional allot-ment required | Amount as in the san-ctioned estimate | Actual expen-diture up-to-date viz. | Probable expen-diture during remain-der of the year | Amount availabl e for re-appro-priation | |
| 2202-02-001-0-03-071 | | | | | 62.94 | 7.00 | 49.12 | 6.82 | ಕಟ್ಟಡಗಳ ನಿರ್ವಹಣೆಗಾಗಿ ವೆಚ್ಚವಾದ ನಂತರವೂ ಈ ಮೊತ್ತ ಉಳಿದಿದೆ. |
| 2202-02-001-0-03-195 | 22.10 | 13.10 | 14.00 | 5.00 | | | | | ಆಯುಕ್ತರ ಕಛೇರಿ ಸಾರಿಗೆ ವೆಚ್ಚ, ಉರ್ದು ಮತ್ತು ಇತರ ಭಾಷಾ ಅಲ್ಪಸಂಖ್ಯಾತ ಸಂಸ್ಥೆಗಳ ನಿರ್ದೇಶನಾಲಯದ ಸಾಮಾನ್ಯ ವೆಚ್ಚ, ದೂರವಾಣಿ ವೆಚ್ಚ, ಸಾರಿಗೆ ವೆಚ್ಚಗಳಿಗೆ ಹಣದ ಕೊರತೆ ಇದೆ. |
| 2202-01-104-0-00-051 | 1.36 | 1.15 | 0.46 | 0.25 | | | | | |
| 2202-01-104-0-03-052 | 0.34 | 0.34 | 0.17 | 0.17 | | | | | |
| 2202-01-104-0-00-195 | 0.52 | 0.52 | 1.40 | 1.40 | | | | | |
| **Total** | | | | **6.82** | | | | | |
| | | | | | | | | | |

**NOTE:** Any further explanations should be given on the reverse.

Station: Bangalore
Date: 28.2.2006
P.R. 338

**K. SRIKNTESHWARA**
Special Officer and Ex-offic Joint Secretary
(Planning) Education Department.

## ಒಳಾಡಳಿತ ಸಚಿವಾಲಯ

### ತಿದ್ದುಪಡಿ

**ಸಂಖ್ಯೆ: ಒಇ 1 ಪಿಪಿಇ 2006 (ಭಾಗ) ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2006**

1. ಸಮಸಂಖ್ಯೆಯ ಸರ್ಕಾರಿ ಆದೇಶ ದಿನಾಂಕ:19.1.2006 ರ ಅಧಿಸೂಚನೆಯಲ್ಲಿನ ತಃಖ್ತೆಯ ಕ್ರಮ ಸಂಖ್ಯೆ (29) ರ ಅಂಕಣ (4) ರಲ್ಲಿ ನಮೂದಿಸಿರುವ '1ನೇ ಅಧಿಕ ಸರ್ಕಾರಿ ಅಭಿಯೋಜಕರು, 1ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಬೀದರ್ ' ಎಂಬುದರ ಬದಲಾಗಿ'1ನೇ ಅಧಿಕ ಸರ್ಕಾರಿ ಅಭಿಯೋಜಕರು, 1ನೇ ಅಧಿಕ ಜಿಲ್ಲಾ ಮತ್ತು ಸತ್ರ ನ್ಯಾಯಾಲಯ, ಹುಬ್ಬಳ್ಳಿ ' ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

2. ಅಲ್ಲದೆ ಕ್ರಮ ಸಂಖ್ಯೆ (50) ರ ಅಂಕಣ (2) ರಲ್ಲಿ ನಮೂದಿಸಿರುವ '1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ಮಂಡ್ಯ' ಎಂಬುದರ ಬದಲಾಗಿ '1ನೇ ತ್ವರಿತ ವಿಲೇವಾರಿ ನ್ಯಾಯಾಲಯ, ದಾವಣಗೆರೆ' ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು. ಇದರ ಹೊರತಾಗಿ ಸದರಿ ಅಧಿಸೂಚನೆಯಲ್ಲಿ ಬೇರೆ ಯಾವ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾ.ಮತ್ತು ಸು. ಮತ್ತು ಕಾಫಿಪೋಸ ಮತ್ತು ಅಭಿಯೋಗ)

ಪಿ.ಆರ್. 339

**ತಿದ್ದುಪಡಿ ಸಂಖ್ಯೆ: ಒಇ 913 ಪಿಪಿಇ 2005 ಬೆಂಗಳೂರು, ದಿನಾಂಕ: 22ನೇ ಫೆಬ್ರವರಿ 2006**

ಸಮಸಂಖ್ಯೆಯ ಸರ್ಕಾರಿ ಆದೇಶ ದಿನಾಂಕ:6.1.2006 ರ ಅಧಿಸೂಚನೆಯಲ್ಲಿನ ತಃಖ್ತೆಯ ಕ್ರಮ ಸಂಖ್ಯೆ (4) ರ ಅಂಕಣ (4) ರಲ್ಲಿ ನಮೂದಿಸಿರುವ "108/02" ಎಂಬುದರ ಬದಲಾಗಿ " 108/05" ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು. ಇದರ ಹೊರತಾಗಿ ಸದರಿ ಅಧಿಸೂಚನೆಯಲ್ಲಿ ಬೇರೆ ಯಾವ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಆರ್.ಎ. ಕುಲಕರ್ಣಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಕಾ.ಮತ್ತು ಸು. ಮತ್ತು ಕಾಫಿಪೋಸ ಮತ್ತು ಅಭಿಯೋಗ)

ಪಿ.ಆರ್. 340

## ಶಿಕ್ಷಣ ಸಚಿವಾಲಯ

**ವಿಷಯ:** 2005-06ನೇ ಶೈಕ್ಷಣಿಕ ಸಾಲಿಗೆ ದಾವಣಗೆರೆ ಜಿಲ್ಲೆ ಹರಪನಹಳ್ಳಿಯ ಟಿ.ಎಂ.ಎ.ಇ ಸೊಸೈಟಿಯ ಟಿ.ಎಂ.ಎ.ಇ. ಸೊಸೈಟೀಸ್ ಬಿ.ಎಡ್. ಕಾಲೇಜು, ಹಾವೇರಿಗೆ ವಿದ್ಯಾರ್ಥಿ ಪ್ರಮಾಣ ನಿರ್ಧರಣೆ.

**ಓದಲಾಗಿದೆ:**
1. ದಿನಾಂಕ:21.02.2004 ರ ಸಂಖ್ಯೆ:ಇಡಿ 202 ಯುಆರ್‌ಸಿ 2003 ರ ಸರ್ಕಾರಿ ಆದೇಶ.
2. ದಿನಾಂಕ:21.12.2005, ಸಂಖ್ಯೆ:F SRO/NCTE/B.Ed/2005-06/ 4804 ರ NCTE ಯ ಪ್ರಾದೇಶಿಕ ನಿರ್ದೇಶಕರ ಪತ್ರ.
3. ದಿ: 03.01.2006 ವ್ಯವಸ್ಥಾಪಕರು, ಟಿ.ಎಂ.ಎ.ಇ. ಸೊಸೈಟಿ, ಹರಪನಹಳ್ಳಿ, ದಾವಣಗೆರೆ ಜಿಲ್ಲೆ, ಇವರ ಪತ್ರ

**ಪೀಠಿಕೆ:**

1) ಸರ್ಕಾರಿ/ವಿಶ್ವವಿದ್ಯಾಲಯ/ಅನುದಾನಿತ/ ಖಾಸಗಿ ಶಿಕ್ಷಣ ಕಾಲೇಜುಗಳಲ್ಲಿ ನಡೆಸಲಾಗುತ್ತಿರುವ ಬಿ.ಇಡಿ/ಬಿ.ಪಿ.ಎಡ್. ಕೋರ್ಸಿನ ವಿದ್ಯಾರ್ಥಿ ಪ್ರಮಾಣವನ್ನು ಪ್ರತಿ ಶೈಕ್ಷಣಿಕ ವರ್ಷಕ್ಕೆ ಅನ್ವಯವಾಗುವಂತೆ ಎನ್.ಸಿ.ಟಿ.ಇ. ಅಧಿನಿಯಮ 1993 ರ 14 ನೇ ಪ್ರಕರಣದಡಿ ಎನ್‌ಸಿಟಿಇ

ಮಂಜೂರು ಮಾಡುವ ವಿದ್ಯಾರ್ಥಿ ಪ್ರಮಾಣವನ್ನು ಕೆ.ಎಸ್.ಯು ಅಧಿನಿಯಮದ 59(18)ನೇ ಪ್ರಕರಣದಡಿ ಓದಲಾದ ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಬಿ.ಇಡಿ. ಕೋರ್ಸುಗಳಿಗೆ ವಿದ್ಯಾರ್ಥಿಗಳ ಪ್ರವೇಶಕ್ಕೆ ಅಭ್ಯರ್ಥಿಗಳ ಆಯ್ಕೆ ನಿಯಮಾವಳಿಗಳು, 1999 ರ 2 (1)ನೇ ನಿಯಮದಡಿ ಸರ್ಕಾರವು ನಿಗದಿಪಡಿಸುತ್ತಿದೆ.

2) ಉಲ್ಲೇಖ (1) ರಲ್ಲಿರುವ ಸರ್ಕಾರಿ ಆದೇಶದಲ್ಲಿ ದಾವಣಗೆರೆ ಜಿಲ್ಲೆ ಹರಪನಹಳ್ಳಿಯ ಟಿ.ಎಂ.ಎ.ಇ. ಸೊಸೈಟಿಯ ಟಿ.ಎಂ.ಎ.ಇ. ಸೊಸೈಟೀಸ್ ಬಿ.ಎಡ್. ಕಾಲೇಜಿಗೆ ಹಾವೇರಿಯಲ್ಲಿ ಬಿ.ಎಡ್. ಕೋರ್ಸನ್ನು 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಪ್ರಾರಂಭಿಸಲು ನಿರಾಕ್ಷೇಪಣಾ ಪತ್ರವನ್ನು ನೀಡಲಾಗಿತ್ತು. ಉಲ್ಲೇಖ (2) ರಲ್ಲಿರುವ ದಿನಾಂಕ: 21.02.2005 ರ ಆದೇಶದಲ್ಲಿ ಎನ್‌ಸಿಟಿಇಯು ಸದರಿ ಕಾಲೇಜಿನ ಬಿ.ಎಡ್. ಕೋರ್ಸಿಗೆ 2005-06ನೇ ಸಾಲಿನಿಂದ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣದೊಂದಿಗೆ ಅನುಮೋದನೆ ನೀಡಿದ್ದು, ಉಲ್ಲೇಖ (3) ರಲ್ಲಿರುವ ದಿನಾಂಕ:03.01.2006 ರ ಪತ್ರದಲ್ಲಿ ಸದರಿ ಸಂಸ್ಥೆಯ ವ್ಯವಸ್ಥಾಪಕರು ತಮ್ಮ ಕಾಲೇಜಿನಲ್ಲಿ ಬಿ.ಎಡ್. ಕೋರ್ಸನ್ನು ಪ್ರಾರಂಭಿಸಲು ಮಂಜೂರಾತಿಯನ್ನು ನೀಡುವಂತೆ ಕೋರಿರುತ್ತಾರೆ. ಅದರಂತೆ ಈ ಕೆಳಕಂಡ ಆದೇಶ

**ಸರ್ಕಾರದ ಆದೇಶ ಸಂಖ್ಯೆ: ಇಡಿ 02 ಯುಆರ್‌ಸಿ 2006, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2006**

3) ಕರ್ನಾಟಕ ರಾಜ್ಯ ವಿಶ್ವವಿದ್ಯಾಲಯಗಳ ಅಧಿನಿಯಮ 2000ದ 59 ನೇ ಪ್ರಕರಣದ (18) ನೇ ಉಪ ಪ್ರಕರಣದೊಂದಿಗೆ ಓದಲಾದ ಕರ್ನಾಟಕ ಬಿ.ಎಡ್.ಕೋರ್ಸುಗಳಿಗೆ ಅಭ್ಯರ್ಥಿಗಳ ಆಯ್ಕೆ ನಿಯಮಗಳು 1999ರ 2 (1) ನೇ ನಿಯಮದಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ದಾವಣಗೆರೆ ಜಿಲ್ಲೆ ಹರಪನಹಳ್ಳಿಯ ಟಿ.ಎಂ.ಎ.ಇ. ಸೊಸೈಟಿಯ ಟಿ.ಎಂ.ಎ.ಇ. ಸೊಸೈಟೀಸ್ ಬಿ.ಎಡ್. ಕಾಲೇಜು, ಹಾವೇರಿ, ಇದರ ಬಿ.ಎಡ್. ಕೋರ್ಸಿಗೆ 2005-2006ನೇ ಶೈಕ್ಷಣಿಕ ಸಾಲಿಗೆ ಅನ್ವಯವಾಗುವಂತೆ 100 (ಒಂದು ನೂರು ಮಾತ್ರ) ವಿದ್ಯಾರ್ಥಿ ಪ್ರಮಾಣವನ್ನು ನಿಗಧಿಪಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಂ.ಪಿ. ಮಂಜುನಾಥ್**

ಪಿ.ಆರ್. 341

ಸರ್ಕಾರದ ಅಧೀನ ಕಾರ್ಯದರ್ಶಿ,
ಶಿಕ್ಷಣ ಇಲಾಖೆ (ವಿಶ್ವವಿದ್ಯಾಲಯಗಳು)

## ಇಂಧನ ಸಚಿವಾಲಯ

**ವಿಷಯ:** ಮೆ:ಸೌತ್ ಕೆನರಾ ಎಲೆಕ್ಟ್ರಿಕ್ ಕಂಪನಿ ಪ್ರೈ.ಲಿ., ಕಂಪನಿ ಹಾಗೂ ಮೆ: ದೇವರ್ ಪವರ್ ಪ್ರೈ.ಲಿ., ಕಂಪನಿ ಇವರಿಗೆ ಹಂಚಿಕೆಯಾದ ಕಿರು ಜಲ ವಿದ್ಯುತ್ ಯೋಜನೆಗಳನ್ನು ವಿಲೀನಗೊಳಿಸಿ, ಇದರ ಸಾಮರ್ಥ್ಯವನ್ನು 6 ಮೆಗಾ ವ್ಯಾಟ್ ನಿಂದ 9 ಮೆಗಾ ವ್ಯಾಟ್‌ಗೆ ಹೆಚ್ಚಿಸುವ ಬಗ್ಗೆ

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಇಂಇ 269 ಎನ್‌ಸಿಇ 2003 ದಿನಾಂಕ:31.12.2003.
2. ಸರ್ಕಾರಿ ಆದೇಶ ಸಂಖ್ಯೆ:ಇಂಇ 244 ಎನ್‌ಸಿಇ 2003 ದಿನಾಂಕ:10.2.2004.
3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ ವ್ಯವಸ್ಥಾಪಕ ನಿರ್ದೇಶಕರ ಪತ್ರ ಸಂಖ್ಯೆ:ಕೆ.ಆರ್. ಇ.ಡಿ/ 06/ಹುಲಿಕಲ್-ಕುಂಚಿಕಲ್/2005/445 ದಿನಾಂ:1.3.2006

**ಪ್ರಸ್ತಾವನೆ:**

ಓದಲಾದ (1)ರ ಆದೇಶದಲ್ಲಿ ಮೆ: ದೇವರ್ ಪವರ್ ಪ್ರೈ.ಲಿ., ಕಂಪನಿಗೆ ಶಿವಮೊಗ್ಗ ಜಿಲ್ಲೆಯ ಹೊಸನಗರ ತಾಲ್ಲೂಕಿನ ಹುಲಿಕಲ್ ಹೊಳೆಗೆ ಅಡ್ಡಲಾಗಿ 4 ಮೆಗಾ ವ್ಯಾಟ್ ಸಾಮರ್ಥ್ಯದ ಹುಲಿಕಲ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (2)ರ ಆದೇಶದಲ್ಲಿ ಮೆ: ಸೌತ್ ಕೆನರಾ ಎಲೆಕ್ಟ್ರಿಕ್ ಕಂಪನಿ ಪ್ರೈ. ಲಿ., ಕಂಪನಿಯವರಿಗೆ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕಿನ ಮಾವಿನಕಾನ ಗ್ರಾಮದ 3 ಕಿ.ಮೀ. ಬಳಿ ಕುಂಚಿಕಲ್ ಫಾಲ್ಸ್ ಹತ್ತಿರ ವರಾಹಿ ನದಿಗೆ ಅಡ್ಡಲಾಗಿ 2 ಮೆಗಾ ವ್ಯಾಟ್ ಸಾಮರ್ಥ್ಯದ ಕುಂಚಿಕಲ್ ಕಿರು ಜಲ ವಿದ್ಯುತ್ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ.

ಓದಲಾದ (3)ರ ಪತ್ರದಲ್ಲಿ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದ, ವ್ಯವಸ್ಥಾಪಕ ನಿರ್ದೇಶಕರು ಮೆ: ಸೌತ್ ಕೆನರಾ ಎಲೆಕ್ಟ್ರಿಕ್ ಕಂಪನಿ ಪ್ರೈ. ಲಿ., ಕಂಪನಿಯವರು ಮೇಲಿನ ಎರಡು ಯೋಜನೆಗಳನ್ನು ಒಟ್ಟಾರೆ ವಿಲೀನಗೊಳಿಸಿ ವರಾಹಿ ಕಿರು ಜಲ ವಿದ್ಯುತ್ ಯೋಜನೆ ಎಂಬ ಹೆಸರಿನಲ್ಲಿ ಯೋಜನೆಯನ್ನು ಅನುಷ್ಠಾನಗೊಳಿಸಲು ನಿರ್ಧರಿಸಿದ್ದು ಇದಕ್ಕೆ ಎರಡು ಕಂಪನಿಯವರೂ ಒಪ್ಪಿಗೆ ಪತ್ರ ಸಲ್ಲಿಸಿದ್ದು ಅದರಂತೆ ಮೆ:ಸೌತ್ ಕೆನರಾ ಎಲೆಕ್ಟ್ರಿಕ್ ಕಂಪನಿ ಪ್ರೈ.ಲಿ., ಇವರಿಗೆ ಒಟ್ಟು 6 ಮೆಗಾ ವ್ಯಾಟ್ (2 ಮೆ. ವ್ಯಾ ಮತ್ತು 4ಮೆ.ವ್ಯಾ=6ಮೆ.ವ್ಯಾ) ಕಿರು ಜಲ ವಿದ್ಯುತ್ ಯೋಜನೆಯನ್ನು ಅನುಷ್ಠಾನಗೊಳಿಸಲು ಹಾಗೂ ಸದರಿ ಯೋಜನೆಯ ಸಾಮರ್ಥ್ಯವನ್ನು 6 ಮೆಗಾ ವ್ಯಾಟ್‌ನಿಂದ 9 ಮೆಗಾ ವ್ಯಾಟ್‌ಗೆ ಹೆಚ್ಚಿಸಿ ಸರ್ಕಾರದ ಅನುಮೋದನೆ ಕೋರಿ ಶಿಫಾರಸ್ಸು ಮಾಡಿರುತ್ತಾರೆ.

ಇದನ್ನು ಸರ್ಕಾರದ ಮಟ್ಟದಲ್ಲಿ ಪರಿಶೀಲಿಸಿ, ಈ ಕೆಳಗಿನಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಇಎನ್ 103ಎನ್‌ಸಿಇ 2006, ಬೆಂಗಳೂರು, ದಿನಾಂಕ: 2ನೇ ಮಾರ್ಚ್ 2006**

ಮೆ: ಸೌತ್ ಕೆನರಾ ಎಲೆಕ್ಟ್ರಿಕ್ ಕಂಪನಿ ಪ್ರೈ.ಲಿ., ಕಂಪನಿಯವರಿಗೆ ಹಂಚಿಕೆ ಮಾಡಿರುವ 2 ಮೆಗಾವ್ಯಾಟ್ ಸಾಮರ್ಥ್ಯದ ಕುಂಚಿಕಲ್ ಕಿರು ಜಲ ವಿದ್ಯುತ್ ಯೋಜನೆ ಹಾಗೂ ಮೆ:ದೇವರ್ ಪವರ್ ಪ್ರೈ. ಲಿ., ಕಂಪನಿಗೆ ಹಂಚಿಕೆ ಮಾಡಿರುವ 4 ಮೆಗಾ ವ್ಯಾಟ್ ಸಾಮರ್ಥ್ಯದ ಹುಲಿಕಲ್ ಕಿರು ಜಲ ವಿದ್ಯುತ್ ಯೋಜನೆಗಳನ್ನು ವಿಲೀನಗೊಳಿಸಿ ಒಟ್ಟು 6 ಮೆಗಾ ವ್ಯಾಟ್ (2 ಮೆ.ವ್ಯಾ ಮತ್ತು 4 ಮೆ. ವ್ಯಾ=6 ಮೆ.ವ್ಯಾ) ಸಾಮರ್ಥ್ಯದ ಒಂದೇ ಯೋಜನೆಯಾಗಿ ವರಾಹಿ ಕಿರು ಜಲ ವಿದ್ಯುತ್ ಯೋಜನೆ ಎಂಬ ಹೆಸರಿನಲ್ಲಿ ಉಡುಪಿ ಜಿಲ್ಲೆಯ ಕುಂದಾಪುರ ತಾಲ್ಲೂಕ್, ಹೊಸಂಗಡಿ ಗ್ರಾಮದ ಸಮೀಪದಲ್ಲಿ ಯೋಜನೆಯನ್ನು ಮೆ:ಸೌತ್ ಕೆನರಾ ಎಲೆಕ್ಟ್ರಿಕ್ ಕಂಪನಿ ಪ್ರೈ. ಲಿ., ರವರಿಗೆ ಅನುಷ್ಠಾನಗೊಳಿಸಲು ಹಾಗೂ

ವಿಲೀನಗೊಂಡಿರುವ ಸದರಿ ಯೋಜನೆಯ ಸಾಮರ್ಥ್ಯವನ್ನು 6 ಮೆಗಾ ವ್ಯಾಟ್‌ನಿಂದ 9 ಮೆಗಾವ್ಯಾಟ್‌ಗೆ ಹೆಚ್ಚಿಸಲು ಸರ್ಕಾರವು ಅನುಮೋದನೆಯನ್ನು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟಂತೆ ನೀಡಲಾಗಿದೆ.

1. (ಅ) ಹಂಚಿಕೆದಾರರು ಈ ಆದೇಶ ಹೊರಡಿಸಿದ ಮೂರು ತಿಂಗಳ ಒಳಗಾಗಿ ಸರ್ಕಾರದೊಂದಿಗೆ ಒಡಂಬಡಿಕೆಯನ್ನು ಮಾಡಿಕೊಳ್ಳತಕ್ಕದ್ದು. ಇಲ್ಲದಿದ್ದಲ್ಲಿ, ಈ ಹಂಚಿಕೆ ತಂತಾನೇ ರದ್ದಾಗುವುದು. ನಂತರ, ಕಂಪನಿಯು ಹಂಚಿಕೆಗೋಸ್ಕರ ಪುನಃ ಹೊಸದಾಗಿ ಅರ್ಜಿ ಸಲ್ಲಿಸತಕ್ಕದ್ದು. ಯಾವ ಕಾರಣಕ್ಕೂ ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಸ್ವೀಕರಿಸಿದ ಅರ್ಜಿ ಪರಿಷ್ಕರಣಾ ಶುಲ್ಕವನ್ನು ಹಿಂದಿರುಗಿಸಲಾಗುವುದಿಲ್ಲ.

(ಆ) ಅಂತಹ ಒಡಂಬಡಿಕೆಯನ್ನು ರೂ.400.00ರ ಛಾಪಾ ಕಾಗದದ ಮೇಲೆ ಮಾಡಿಕೊಂಡು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತದವರಿಗೆ ಕಳುಹಿಸಿ ಪ್ರಮಾಣೀಕರಿಸಿ ಸರ್ಕಾರಕ್ಕೆ ಕಳುಹಿಸಿಕೊಡತಕ್ಕದ್ದು.

(ಇ) ಈ ಒಡಂಬಡಿಕೆಯನ್ನು ಮಾಡಿಕೊಳ್ಳುವ ಮೊದಲು ಯೋಜನಾ ಅಭಿವೃದ್ಧಿದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಕ್ಕೆ ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಪರಿಷ್ಕರಿಸಲು ಮೆಗಾವಾಟ್ ಒಂದಕ್ಕೆ ರೂ. 25,000.00 ದಂತೆ ರೂ.1.00 ಲಕ್ಷಕ್ಕೆ ಕಡಿಮೆ ಇಲ್ಲದಂತೆ ಪಾವತಿಸತಕ್ಕದ್ದು.

2. (ಅ) ಯೋಜನಾ ಅಭಿವೃದ್ಧಿದಾರರು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದಲೂ ಅಂದರೆ ನೀರಾವರಿ, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ, ಕರ್ನಾಟಕ ಮಾಲಿನ್ಯ ನಿಯಂತ್ರಣ ಮಂಡಳಿ, ಕಂದಾಯ ಇಲಾಖೆ, ಅರಣ್ಯ ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆ ಮತ್ತು ಕರ್ನಾಟಕ ವಿದ್ಯುತ್ ನಿಗಮ ನಿಯಮಿತ (ಕೆ.ಪಿ.ಸಿ.ಎಲ್.) ಗಳಿಂದ ಕ್ಲಿಯರೆನ್ಸ್‌ಗಾಗಿ ಅರ್ಜಿ ಸಲ್ಲಿಸತಕ್ಕದ್ದು. ಒಡಂಬಡಿಕೆ ಮಾಡಿಕೊಂಡ ಒಂದು ವರ್ಷದೊಳಗಾಗಿ ವಿವರವಾದ ಯೋಜನಾ ವರದಿಯನ್ನು ಸಲ್ಲಿಸತಕ್ಕದ್ದು.

(ಆ) ಹಂಚಿಕೆದಾರರು ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತಕ್ಕೆ ಠೇವಣಿ ಇಡುವ ಹಣವನ್ನು, ವಿವರವಾದ ಯೋಜನಾ ವರದಿಯನ್ನು (ಡಿಪಿಆರ್) ಆವಿಷ್ಕರಿಸುವುದಕ್ಕೋಸ್ಕರ ಹೊಂದಾಣಿಕೆ ಮಾಡಿಕೊಳ್ಳಲಾಗುವುದು.

3. ಕರ್ನಾಟಕ ನವೀಕರಿಸಬಹುದಾದ ಇಂಧನ ಅಭಿವೃದ್ಧಿ ನಿಯಮಿತವು ಯೋಜನಾ ವರದಿಗೆ ತಾಂತ್ರಿಕ ಅನುಮೋದನೆ ಕೊಟ್ಟ ಆರು ತಿಂಗಳ ಒಳಗಾಗಿ ಫೈನಾನ್ಶಿಯಲ್ ಕ್ಲೋಷರ್‌ನ್ನು ಸಾಧಿಸತಕ್ಕದ್ದು.

4. ಫೈನಾನ್ಶಿಯಲ್ ಕ್ಲೋಝುರ್‌ನ್ನು (Financial Closure) ಸಾಧಿಸಿದ 24 ತಿಂಗಳ ಒಳಗಾಗಿ ಯೋಜನೆಯನ್ನು ಮುಗಿಸುವ ನಿಟ್ಟಿನಲ್ಲಿ ಹಂಚಿಕೆದಾರರು ಕಾರ್ಯಪ್ರವೃತ್ತರಾಗತಕ್ಕದ್ದು.

5. ಮೇಲೆ ತಿಳಿಸಿದ 2,3 ಮತ್ತು 4 ಅಂಶಗಳ ಯೋಜನಾ ಅನುಷ್ಠಾನ ಮಾಡಲು ಸಫಲವಾಗದಿದ್ದಲ್ಲಿ ಈ ಹಂಚಿಕೆಯು ತಂತಾನೇ ಯಾವ ಮುನ್ಸೂಚನೆಯನ್ನೂ ನೀಡದೆ ರದ್ದಾಗುವುದೆಂದು ತಿಳಿಯತಕ್ಕದ್ದು.

6. ಯೋಜನಾ ಅಭಿವೃದ್ಧಿದಾರರು ವಿದ್ಯುತ್‌ನ್ನು ಮೂರನೆಯವರಿಗೆ ಮಾರಾಟ ಮಾಡುವ ಸಂದರ್ಭದಲ್ಲಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದೊಂದಿಗೆ ವೀಲಿಂಗ್ ಅಂಡ್ ಬ್ಯಾಂಕಿಂಗ್ ಒಡಂಬಡಿಕೆ ಮಾಡಿಕೊಳ್ಳಲು ಮತ್ತು ಮಂಗಳೂರು ವಿದ್ಯುತ್ ಸರಬರಾಜು ಕಂಪನಿಯೊಂದಿಗೆ ವಿದ್ಯುತ್ತನ್ನು ಮಾರಾಟ ಮಾಡುವ ಸಂದರ್ಭದಲ್ಲಿ ವಿದ್ಯುತ್ ಖರೀದಿ ಒಡಂಬಡಿಕೆ (ಪಿಪಿಎ) ಮಾಡಿಕೊಳ್ಳಲು ಅನುಮತಿ ನೀಡಲಾಗಿದೆ.

7. ಈ ವಿಷಯದಲ್ಲಿ ಹಂಚಿಕೆದಾರರು ರಾಜ್ಯ ಮತ್ತು ಜಿಲ್ಲಾ ಮಟ್ಟಕ್ಕೆ ಸಂಬಂಧಿಸಿದ ಅಧಿಕಾರಿಗಳ ಸಹಾಯ /ಸಹಕಾರವನ್ನು ಪಡೆದು ನಿಗದಿತ ಅವಧಿಯೊಳಗೆ ಯೋಜನಾ ಅನುಷ್ಠಾನ ಪೂರ್ಣಗೊಳಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಸುರೇಶ್.ಬಿ.ಕೃಷ್ಣಪ್ಪನವರ್**

ಪಿ.ಆರ್. 342 ಸರ್ಕಾರದ ಅಧೀನ ಕಾರ್ಯದರ್ಶಿ, ಇಂಧನ ಇಲಾಖೆ

## ಒಳಾಡಳಿತ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಒಇ 728 ಪಿಪಿಇ 2005, ಬೆಂಗಳೂರು, ದಿನಾಂಕ: 1ನೇ ಮಾರ್ಚ್ 2006**

1) ಸಮಸಂಖ್ಯೆಯ ಸರ್ಕಾರಿ ಆದೇಶ ದಿನಾಂಕ:17.10.2005ರ ಅಧಿಸೂಚನೆಯಲ್ಲಿನ ತಃಖ್ತೆಯ ಕ್ರಮ ಸಂಖ್ಯೆ (21) ರ ಅಂಕಣ (4) ರಲ್ಲಿ ನಮೂದಿಸಿರುವ 'ವಿಶೇಷ ಸರ್ಕಾರಿ ಅಭಿಯೋಜಕರು 1ನೇ ತ್ವರಿತ ವಿಲೇವಾರಿ ನ್ಯಾಯಾಲಯ ಬಿಜಾಪುರ' ಎಂಬುದರ ಬದಲಾಗಿ '4ನೇ ಅಪರ ಸರ್ಕಾರಿ ಅಭಿಯೋಜಕರು, ಬಿಜಾಪುರ' ಎಂದು ತಿದ್ದಿಕೊಂಡು ಓದಿಕೊಳ್ಳತಕ್ಕದ್ದು.

2) ಸಮಸಂಖ್ಯೆಯ ಸರ್ಕಾರಿ ಆದೇಶ ದಿನಾಂಕ:17.10.2005ರ ಅಧಿಸೂಚನೆಯಲ್ಲಿನ ತಃಖ್ತೆಯ ಕ್ರಮ ಸಂಖ್ಯೆ (5) ಕ್ಕೆ ಸಂಬಂಧಿಸಿದಂತೆ ಹೊರಡಿಸಿರುವ ಆದೇಶವನ್ನು ಹಿಂಪಡೆಯಲಾಗಿದೆ. ಇವುಗಳ ಹೊರತಾಗಿ ಸದರಿ ಅಧಿಸೂಚನೆಯಲ್ಲಿ ಬೇರೆ ಯಾವ ಬದಲಾವಣೆ ಇರುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್.ಎ. ಕುಲಕರ್ಣಿ**

ಪಿ.ಆರ್. 343 ಸರ್ಕಾರದ ಅಧೀನ ಕಾರ್ಯದರ್ಶಿ,

ಒಳಾಡಳಿತ ಇಲಾಖೆ (ಕಾ.ಮತ್ತು ಸು. ಮತ್ತು ಕಾಫಿಫೋಸ ಮತ್ತು ಅಭಿಯೋಗ)

## ಮೂಲಸೌಲಭ್ಯ ಅಭಿವೃದ್ಧಿ ಸಚಿವಾಲಯ

**ವಿಷಯ:** ಮೈಸೂರು ವಿಮಾನ ನಿಲ್ದಾನ ಅಭಿವೃದ್ಧಿಗಾಗಿ ಹಣ ಬಿಡುಗಡೆ.

**ಓದಲಾಗಿದೆ:**
1. ಸರ್ಕಾರದ ಆದೇಶ ಸಂಖ್ಯೆ:IDD 83 DIA 03 ದಿನಾಂಕ:18.02.2005.
2. ಸರ್ಕಾರದ ಆದೇಶ ಸಂಖ್ಯೆ: IDD 83 DIA 03 ದಿನಾಂಕ:26.03.2005.
3. ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಕೆಐಎಡಿಬಿ ಇವರ ಪತ್ರ ಸಂಖ್ಯೆ: ಕಾಕೈಪ್ರಅಮಂ:1219-111:11210: 2005-06 ದಿನಾಂಕ: 6.12.2005.
4. ಸರ್ಕಾರದ ಪತ್ರ ಸಂಖ್ಯೆ . IDD 83 DIA 03 ದಿನಾಂಕ:2.1.2006.
5. ಆದೇಶ ಸಂಖ್ಯೆ.FD 62 BRS 2006 ದಿನಾಂಕ:15.02.2006.

**ಪ್ರಸ್ತಾವನೆ:**

ಮೇಲೆ ಓದಲಾಗಿರುವ ಸರ್ಕಾರಿ ಪತ್ರ ದಿನಾಂಕ 18.02.2005 ರಲ್ಲಿ ಮೈಸೂರು ವಿಮಾನ ನಿಲ್ದಾಣ ಅಭಿವೃದ್ಧಿಗಾಗಿ ಅಂದರೆ ಹಾಲಿಯಿರುವ ಮಂಡಕಳ್ಳಿ ವಿಮಾನ ನಿಲ್ದಾಣವನ್ನು ಉನ್ನತೀಕರಿಸಲು ಭಾರತೀಯ ವಿಮಾನ ನಿಲ್ದಾಣ ಪ್ರಾಧಿಕಾರವು ಗುರುತಿಸಿ ನಮೂದಿಸಿರುವ 175 ಎಕರೆ ಜಮೀನನ್ನು ಸ್ವಾಧೀನಪಡಿಸಿಕೊಳ್ಳಲು ಹಾಗೂ ಈ ಉದ್ದೇಶಕ್ಕಾಗಿ ಮಂಡಕಳ್ಳಿ ಗ್ರಾಮದಲ್ಲಿ 25.03 ಎಕರೆ, ಮರಿಶೆ ಗ್ರಾಮದಲ್ಲಿ 109.26 ಎಕರೆ ಜಮೀನಿಗೆ ಹಿಂದೆ ಕೆಐಎಡಿಬಿ ಪ್ರಾಥಮಿಕ ಅಧಿಸೂಚನೆ ಹೊರಡಿಸಿದ್ದು, ಈ ಪ್ರಕ್ರಿಯೆಯನ್ನು ಮುಂದುವರಿದಂತೆ ಹಾಗೂ ಉಳಿದ 43.33 ಎಕರೆ ಜಮೀನಿನ ಬಗ್ಗೆ

ಹೊಸದಾಗಿ ಭೂ ಪ್ರಕ್ರಿಯೆ ನಡೆಸಲು ಕೆಐಎಡಿಬಿ ಕಾಯಿದೆಯಡಿಯ ಹಾಗೂ ತುರ್ತು ನಿಯಮದಡಿ ಇದನ್ನು ಕೈಗೊಳ್ಳಲು ಕರ್ನಾಟಕ ಕೈಗಾರಿಕ ಪ್ರದೇಶ ಅಭಿವೃದ್ಧಿ ಮಂಡಳಿಗೆ ಸೂಚಿಸಲಾಗಿದೆ.

2. ಮೇಲಿನ ಉಲ್ಲೇಖ (2) ರಲ್ಲಿ ಇರುವ ಸರ್ಕಾರಿ ಆದೇಶ ದಿನಾಂಕ: 26.03.2005 ರಲ್ಲಿ ತಿಳಿಸಿರುವ ಭೂಸ್ವಾಧೀನದ ಉದ್ದೇಶಕ್ಕಾಗಿ ರೂ.50.00 ಲಕ್ಷಗಳನ್ನು ಕೆಐಎಡಿಬಿಗೆ ಬಿಡುಗಡೆ ಮಾಡಲಾಗಿದೆ. ತದನಂತರ ಭಾರತೀಯ ವಿಮಾನ ನಿಲ್ದಾಣಗಳ ಪ್ರಾಧಿಕಾರದವರ (AAI) ಸಹಯೋಗದೊಂದಿಗೆ ಮೈಸೂರು ವಿಮಾನ ನಿಲ್ದಾಣ ನಿರ್ಮಾಣ, ನಿರ್ವಹಣೆ ಹಾಗೂ ಕಾರ್ಯಚರಣೆಯನ್ನು ವಹಿಸುವ ನಿಟ್ಟಿನಲ್ಲಿ ದಿನಾಂಕ:6.10.2005 ರಂದು ಒಂದು ಜ್ಞಾಪನ ಪತ್ರಕ್ಕೆ (MOU) ನವದೆಹಲಿಯಲ್ಲಿ ಪ್ರಧಾನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರು ಸಹಿ ಹಾಕಿರುತ್ತಾರೆ.

3. ಉಲ್ಲೇಖ (3)ರಲ್ಲಿ ಓದಲಾಗಿರುವ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಕೆಐಎಡಿಬಿ ಇವರ ದಿನಾಂಕ:6.12.2005 ರ ಪತ್ರದಲ್ಲಿ ಮೇಲೆ ತಿಳಿಸಿರುವ 175 ಎಕರೆ ಜಮೀನಿನ ಪೈಕಿ ಮಂಡಕಳ್ಳಿ ಮತ್ತು ಮರಿಶೆ ಗ್ರಾಮಗಳಲ್ಲಿ ಒಟ್ಟು 108.26 ಎಕರೆ ಜಮೀನುಗಳಿಗೆ ಹಾಗೂ ಮಂಡಕಳ್ಳಿ ಗ್ರಾಮದಲ್ಲಿಯೇ 36.28 ಎಕರೆ ಜಮೀನುಗಳಿಗೆ ಭೂಸ್ವಾಧೀನಕ್ಕಾಗಿ ದಿನಾಂಕ 8.6.2005 ರಂದು ಮತ್ತು ದಿನಾಂಕ:27.12.2005 ರಂದು ರಾಜ್ಯ ಪತ್ರದಲ್ಲಿ ಪ್ರಕಟಣೆ ಮಾಡಿದ್ದು, ಈ ಬಾಬ್ತು ಭೂ ಪರಿಹಾರ ಪಾವತಿಸಲು ಈಗಾಗಲೇ ತಾವು ರೂ.5.50 ಕೋಟಿಗಳನ್ನು ವಿಶೇಷ ಭೂಸ್ವಾಧೀನಾಧಿಕಾರಿಯವರಿಗೆ ಬಿಡುಗಡೆ ಮಾಡಲಾಗಿದೆ ಎಂದು, ಇದಲ್ಲದೆ 23.30 ಎಕರೆ ಜಮೀನಿನ ಭೂಸ್ವಾಧೀನ ಪ್ರಕ್ರಿಯೆಯು ನಡೆಯುತ್ತಿದ್ದು, ಭೂ ದರವನ್ನು ಮೈಸೂರು ಜಿಲ್ಲಾಧಿಕಾರಿಯವರು ನಿಗಧಿ ಮಾಡುತ್ತಿರುವುದಾಗಿಯೂ, ಇದಲ್ಲದೆ ಅರಣ್ಯ ಇಲಾಖೆಯಿಂದ ಮರ ಮಾಲ್ಕಿ, ಮೌಲ್ಯಮಾಪನ ಕೂಡ ನಿಗಧಿಗೊಳ್ಳುತ್ತಿರುವುದಾಗಿ ತಿಳಿಸುತ್ತಾ ಸರ್ಕಾರದ ವತಿಯಿಂದ ಒಟ್ಟಾರೆ ಈ ಭೂಸ್ವಾಧಿನದ ವೆಚ್ಚವು ರೂ.10,96,62,000.00 ರೂ. ಗಳೆಂದು, ಈ ಬಾಬ್ತು ಈಗಾಗಲೇ ಸರ್ಕಾರದಿಂದ ಬಿಡುಗಡೆಯಾಗಿರುವ ಅನುದಾನ ರೂ.6,30,00,000.00 ರೂ. ಗಳನ್ನು ಕಳೆದು ಉಳಿದ ರೂ.4,66,62,000.00 (ರೂ. ನಾಲ್ಕು ಕೋಟಿ ಅರವತ್ತಾರು ಲಕ್ಷದ ಅರವತ್ತೆರಡು ಸಾವಿರಗಳು) ರೂ. ಗಳನ್ನು ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಳಿಗೆ (ಕೆಐಎಡಿಬಿ) ಜರೂರಾಗಿ ಬಿಡುಗಡೆ ಮಾಡಲು ಸರ್ಕಾರವನ್ನು ಕೋರಿರುತ್ತಾರೆ.

4. ಉಲ್ಲೇಖ (4) ರಲ್ಲಿ ಓದಲಾಗಿರುವ ಸರ್ಕಾರದ ದಿನಾಂಕ: 2.1.2006 ರ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳಿಗೆ ಹಾಗೂ ವ್ಯವಸ್ಥಾಪಕ ನಿರ್ದೇಶಕರು, ಕರ್ನಾಟಕ ಕೈಗಾರಿಕ ಪ್ರದೇಶ ಅಭಿವೃದ್ಧಿ ಮಂಡಳಿ (ಕೆಐಎಡಿಬಿ) ಇವರಿಗೆ ಮೇಲಿನ ಉದ್ದೇಶಕ್ಕಾಗಿ ಅವರ ಬಳಿ ಈಗಾಗಲೇ ಇರುವ ರೂ. 3,80,00,000.00 ರೂ. ಗಳನ್ನು ಹಾಗೂ ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿಗಾಗಿ ಐಡೆಕ್ ಸಂಸ್ಥೆಗೆ ನಿಡಲಾಗಿದ್ದು, ಆದರೆ ಉಪಯೋಗಿಸದೇ ಇದ್ದ ರೂ. 1.00 ಕೋಟಿಗಳು, ಹೀಗೆ ಒಟ್ಟು ರೂ.4,80,00,000.00 (ರೂ. ನಾಲ್ಕು ಕೋಟಿ ಎಂಬತ್ತು ಲಕ್ಷಗಳು) ರೂ.ಗಳನ್ನು ಬಳಸಿಕೊಳ್ಳಲು ಅನುಮತಿಯನ್ನು ನೀಡಲಾಗಿರುತ್ತದೆ. ಹೀಗಾಗಿ ಉಳಿದ ರೂ.4,00,00,000.00 ರೂ.ಗಳಿಗೆ ಉಲ್ಲೇಖ (5) ರಲ್ಲಿ ಇರುವ ಸರ್ಕಾರದ ಆದೇಶ ದಿನಾಂಕ:15.02.2006 ರಲ್ಲಿ ಲೆಕ್ಕ ಶೀರ್ಷಿಕೆ "5465-01-190-3-06 (ಯೋಜನೆ) ಹೊಸ ವಿಮಾನ ನಿಲ್ದಾಣಕ್ಕೆ ರೈಲು ಸಂಪರ್ಕ-211-ಬಂಡವಾಳ" ಇದರಲ್ಲಿ ಲಭ್ಯವಿರುವ ರೂ.5,00,00,000.00 ಕೋಟಿ ಒದಗಣೆಯಿಂದ ರೂ.4,00,00,000.00 ಕೋಟಿಗಳನ್ನು ಲೆಕ್ಕ ಶೀರ್ಷಿಕೆ "5465-01-190-1-05 (ಯೋಜನೆ) ಸಣ್ಣ ವಿಮಾನ ನಿಲ್ದಾಣಗಳ ಅಭಿವೃದ್ಧಿ-211-ಬಂಡವಾಳ" ಈ ಲೆಕ್ಕ ಶೀರ್ಷಿಕೆಗೆ ಹೊಂದಾಣಿಕೆ ಮಾಡಿಕೊಳ್ಳಲು ಅನುಮೋದನೆಯನ್ನು ಆರ್ಥಿಕ ಇಲಾಖೆಯು ನೀಡಿರುತ್ತದೆ.

5. ಆದಕಾರಣ ಈ ಕೆಳಗಿನಂತೆ ಆದೇಶವನ್ನು ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ: ಮೂಅಇ 83 ರಾಅವಿ 2003, ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2006**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಅಂಶಗಳ ಹಿನ್ನಲೆಯಲ್ಲಿ ಸರ್ಕಾರವು ಮುಖ್ಯ ನಿರ್ವಹಣಾಧಿಕಾರಿಗಳು, ಕರ್ನಾಟಕ ಕೈಗಾರಿಕ ಪ್ರದೇಶ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರ ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿ ರೂ.4,00,00,000.00 ಕೋಟಿಗಳನ್ನು (ರೂ.ನಾಲ್ಕು ಕೋಟಿ) ಮಾತ್ರ ಮೈಸೂರು ವಿಮಾನ ನಿಲ್ದಾಣ ಅಭಿವೃದ್ಧಿಗಾಗಿ ಭೂಸ್ವಾಧೀನಕ್ಕೆ ಪರಿಹಾರವಾಗಿ ನೀಡಲು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಹಾಗೂ ಕಾರ್ಯಕಾರಿ ಸದಸ್ಯರು ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಳಿ ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿಯನ್ನು ನೀಡಲಾಗಿದೆ.

2. ಈ ವೆಚ್ಚವನ್ನು ಲೆಕ್ಕ ಶೀರ್ಷಿಕೆ "5465-01-190-1-06 (ಯೋಜನೆ)-211" ಯಿಂದ ಲೆಕ್ಕ ಶೀರ್ಷಿಕೆ 5465-01-190-1-05 (ಯೋಜನೆ)-211"ಗೆ ಮರು ಹೊಂದಾಣಿಕೆ ಮಾಡಿರುವ ಬಾಬ್ತಿನಿಂದ ಭರಿಸತಕ್ಕದ್ದು.

3. ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು ಹಾಗೂ ಕಾರ್ಯಕಾರಿ ಸದಸ್ಯರು, ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಳಿ, ಬೆಂಗಳೂರು ಇವರು Payees ರಸೀದಿಯ ಮೇಲೆ ಸರ್ಕಾರದ ಅಧೀನ ಕಾರ್ಯದರ್ಶಿ, ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ ಇವರ ಮೇಲು ರುಜುವಿನೊಂದಿಗೆ ಖಜಾನೆಯಿಂದ ಹಣ ಪಡೆಯಲು ಅಧಿಕಾರವನ್ನು ನೀಡಲಾಗಿದೆ.

4. ಈ ಆದೇಶವನ್ನು ಸರ್ಕಾರದ ಆದೇಶ ಸಂಖ್ಯೆ. FD 62 BRS 2006 ದಿನಾಂಕ:15.2.2006 ರನ್ವಯ ಹಾಗೂ ಆರ್ಥಿಕ ಇಲಾಖೆಯ ಸಹಮತಿಯನ್ನು ಟಿಪ್ಪಣಿ ಸಂಖ್ಯೆ. FD 70 EXP-I/06 ದಿನಾಂಕ:23.02.2006 ರನ್ವಯ ಪಡೆದು ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಟಿ.ಬಿ. ರೇಣುಕಾಪ್ರಸಾದ್**

ಪಿ.ಆರ್. 344

ಅಧೀನ ಕಾರ್ಯದರ್ಶಿ,

ಮೂಲಸೌಲಭ್ಯ ಅಭಿವೃದ್ಧಿ ಇಲಾಖೆ

## ಜಲಸಂಪನ್ಮೂಲ ಸಚಿವಾಲಯ

**ವಿಷಯ:** ರಾಜ್ಯದ ಅಚ್ಚುಕಟ್ಟು ಪ್ರದೇಶಾಭಿವೃದ್ಧಿ ಪ್ರಾಧಿಕಾರಗಳಲ್ಲಿ ನೇಮಕಾತಿ ಹೊಂದಿದ ನೌಕರರುಗಳ ಮೃತರ ಅವಲಂಭಿತರಿಗೆ ಅನುಕಂಪದ ಆಧಾರದ ಮೇಲೆ ನೇಮಕಾತಿ ನೀಡಲು ಕರ್ನಾಟಕ ಸಿವಿಲ್ ಸೇವೆಗಳ (ಅನುಕಂಪದ ಆಧಾರದ ನೇಮಕಾತಿ) ನಿಯಮಗಳು 1996 ನ್ನು ಯತಾವತ್ತಾಗಿ ಅಳವಡಿಸುವ ಬಗ್ಗೆ ಆದೇಶ

**ಓದಲಾಗಿದೆ:**
1. ಸರ್ಕಾರದ ಅಧಿಸೂಚನೆ ಸಂಖ್ಯೆ:ಸಿಆಸುಇ 100 ಸೇಅಸೇ 95, ದಿ:12.9.1996.
2. ಸರ್ಕಾರದ ಅಧಿಸೂಚನೆ ಸಂಖ್ಯೆ:ಐಡಿ 28 ಸಿಎಎಂ 93, ದಿ:12.3.2001.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರ.ಸಂ.(2) ರ ಸರ್ಕಾರದ ಅಧಿಸೂಚನೆಯಲ್ಲಿ ರಾಜ್ಯದ ಕಾಡಾ ಪ್ರಾಧಿಕಾರಿಗಳಿಗೆ ತನ್ನದೇ ಆದ ವೃಂದ ಮತ್ತು ನೇಮಕಾತಿ ನಿಯಮಗಳನ್ನು ರಚಿಸಲಾಗಿರುತ್ತದೆ. ಸದರಿ ನಿಯಮಗಳಿಗೆ ಅನ್ವಯವಾಗುವಂತೆ ಪ್ರಾಧಿಕಾರದಲ್ಲಿ ನೇಮಕಾತಿ ಹೊಂದಿ ಸೇವೆ ಸಲ್ಲಿಸಿ, ಸೇವಾವಧಿಯಲ್ಲಿ

ಮೃತ ಹೊಂದಿದ ನೌಕರರ ಅವಲಂಬಿತರಿಗೆ ಮೇಲೆ ಓದಲಾದ ಕ್ರ.ಸಂ. (1) ರ ಸರ್ಕಾರದ ಅಧಿಸೂಚನೆಯನ್ವಯ ಕರ್ನಾಟಕ ಸಿವಿಲ್ ಸೇವೆಗಳು (ಅನುಕಂಪದ ಆಧಾರದ ಮೇಲೆ ನೇಮಕಾತಿ) ನಿಯಮಗಳು, 1996 ರಂತೆ ಆಯಾ ಪ್ರಾಧಿಕಾರದ ಇಲಾಖಾ ಮುಖ್ಯಸ್ಥರ ಹುದ್ದೆಯ ಅಧಿಕಾರಿಗಳಾದ ಆಡಳಿತಾಧಿಕಾರಿಗಳು ಅನುಕಂಪದ ಆಧಾರದ ನೇಮಕಾತಿಗಳನ್ನು ನೀಡಿಕೊಂಡು ಬರುತ್ತಿದ್ದಾರೆ. ಅನುಕಂಪದ ಆಧಾರದ ಮೇಲೆ ನೇಮಕಾತಿ ಮಾಡುವ ಕುರಿತು ಆಯಾ ಪ್ರಾಧಿಕಾರದ ಮೃತ ನೌಕರರ ಅವಲಂಬಿತರು ಹಾಗೂ ಪ್ರಾಧಿಕಾರದ ಆಡಳಿತಾಧಿಕಾರಿಗಳು ಅನುಮತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.

ಈ ಕುರಿತು ಸರ್ಕಾರದ ಆದೇಶ ಅಗತ್ಯವಾಗಿರುವುದರಿಂದ ಸರ್ಕಾರವು ಪ್ರಸ್ತಾವನೆಯನ್ನು ಪರಿಶೀಲಿಸಲು ಎಲ್ಲಾ ಕಾಡಾ ಪ್ರಾಧಿಕಾರಗಳ ಆಡಳಿತಾಧಿಕಾರಿಯವರಿಂದ ಈಗಾಗಲೇ ಪ್ರಾಧಿಕಾರದಲ್ಲಿ ಅನುಕಂಪದ ಆಧಾರದ ಮೇಲೆ ನೇಮಕಾತಿ ಮಾಡಿರುವ ಹಾಗೂ ನೇಮಕಾತಿ ಮಾಡಲು ಬಾಕಿಯಿರುವ ಪ್ರಕರಣಗಳ ಕುರಿತು ಅಭಿಪ್ರಾಯ ಹಾಗೂ ಮಾಹಿತಿಯನ್ನು ಪಡೆಯಲಾಯಿತು. ಆಡಳಿತಾಧಿಕಾರಿಗಳು ಅನುಕಂಪದ ಆಧಾರದ ನೇಮಕಾತಿಯ ಬಗ್ಗೆ ಹಾಲಿ ಇರುವ ನಿಯಮವನ್ನು ಯತ್ತಾವತ್ತಾಗಿ ಕಾಡಾ ಪ್ರಾಧಿಕಾರಗಳಲ್ಲೂ ಅನ್ವಯಿಸುವಂತೆ ಆದೇಶ ಹೊರಡಿಸಲು ಕೋರಿರುತ್ತಾರೆ.

ಅನುಕಂಪದ ಆಧಾರದ ನೇಮಕಾತಿ ನಿಯಮ 1996 ರ "ನಿಯಮ 1(3)ರಲ್ಲಿ ಯಾವುದೇ ಸೇವೆಗಳ ಅಥವಾ ಹುದ್ದೆಗಳ ಸಂಬಂಧದಲ್ಲಿ ವಿಶೇಷವಾಗಿ ರಚಿಸಲಾದ ಅಥವಾ ರಚಿಸಲಾದುದೆಂದು ಭಾವಿಸಲಾದ ನೇಮಕಾತಿ ನಿಯಮಗಳಲ್ಲಿ ಏನೇ ಇದ್ದರೂ ಈ ನಿಯಮಗಳು ಮೃತ ಸರ್ಕಾರಿ ನೌಕರರ ಅವಲಂಬಿತರನ್ನು ಅನುಕಂಪದ ಆಧಾರದ ಮೇಲೆ ನೇಮಕಾತಿ ಮಾಡುವುದಕ್ಕೆ ಸಂಬಂಧಪಟ್ಟಂತೆ ಅನ್ವಯವಾಗತಕ್ಕದ್ದೆಂದು" ಸೂಚಿಸಿರುವ ಹಿನ್ನೆಲೆಯಲ್ಲಿ ಕಾಡಾ ವೃಂದ ಮತ್ತು ನೇಮಕಾತಿ ನಿಯಮವೂ ಸಹ ಅಂತಹ ಒಂದು ವಿಶೇಷ ನೇಮಕಾತಿ ನಿಯಮವಾಗಿರುವುದರಿಂದ ಮತ್ತು ಕಾಡಾ ಪ್ರಾಧಿಕಾರದಿಂದ ನೇಮಕಾತಿ ಹೊಂದಿರುವ ಸಿಬ್ಬಂದಿಗೂ ಕರ್ನಾಟಕ ನಾಗರೀಕ ಸೇವಾ ನಿಯಮಾವಳಿಗಳು ಅನ್ವಯವಾಗುವುದರಿಂದ ಪ್ರಾಧಿಕಾರದಲ್ಲಿ ನೇಮಕಾತಿ ಹೊಂದಿ ಸಕ್ರಮ ಹೊಂದಿದ್ದ, ಸೇವಾವಧಿಯಲ್ಲಿ ಮೃತ ಹೊಂದಿದ ನೌಕರರ ಅವಲಂಭಿತರಿಗೂ ಸಹ ಅನುಕಂಪದ ಆಧಾರದ ಮೇಲೆ ನೇಮಕಾತಿ ಮಾಡಿಕೊಳ್ಳುವ ವಿಷಯವನ್ನು ಕೂಲಂಕಷವಾಗಿ ಪರಿಶೀಲಿಸಿ ಈ ಮುಂದಿನಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಜಸಂಇ 94 ಸಿಎಎಂ 2005 ಬೆಂಗಳೂರು, ದಿನಾಂಕ: 4ನೇ ಮಾರ್ಚ್ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನಲೆಯಲ್ಲಿ ರಾಜ್ಯದ ಅಚ್ಚುಕಟ್ಟು ಕಾಡಾ ಪ್ರಾಧಿಕಾರಗಳಲ್ಲಿ ಕ್ರಮಬದ್ಧ ನೇಮಕಾತಿ ಹೊಂದಿ ಸಕ್ರಮ ಸೇವೆಯಲ್ಲಿರುವ ನೌಕರರು, ಅವರ ಸೇವಾಧಿಯಲ್ಲಿ ಮೃತಪಟ್ಟಲ್ಲಿ, ಮೃತ ನೌಕರರ ಅವಲಂಭಿತರಿಗೆ ಅನುಕಂಪದ ಆಧಾರದ ಮೇಲೆ ನೇಮಕಾತಿ ನೀಡಲು ಅನುವಾಗುವಂತೆ ಕರ್ನಾಟಕ ಸಿವಿಲ್ ಸೇವೆಗಳು (ಅನುಕಂಪದ ಆಧಾರದ ನೇಮಕಾತಿ) ನಿಯಮಗಳು 1996 ನ್ನು ಯತಾವತ್ತಾಗಿ ವಿಸ್ತರಿಸಲು ಸರ್ಕಾರವು ಅನುಮೋದನೆ ನೀಡಿದೆ. ಅನುಕಂಪದ ನೇಮಕಾತಿಗೆ ಸಂಬಂಧಿಸಿದಂತೆ ಸರ್ಕಾರವು (ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯು) ಕಾಲಕಾಲಕ್ಕೆ ಹೊರಡಿಸಲ್ಪಟ್ಟ/ ಹೊರಡಿಸಬಹುದಾದ ಸೂಚನೆಗಳು/ಸುತ್ತೋಲೆ/ಆದೇಶ /ಇತ್ಯಾದಿಗಳು ಅನ್ವಯವಾಗತಕ್ಕದ್ದು, ಹಾಗೂ ಮೇಲಿನ ನಿಯಮದಲ್ಲಿ ವಿವರಿಸಿರುವ ಎಲ್ಲಾ ಅಂಶಗಳನ್ನು ಅನುಸರಿಸಿ ಹಾಗೂ ಈ ಕೆಳಕಂಡ ಷರತ್ತಿಗೊಳಪಡಿಸಿ ಅನುಕಂಪದ ಆಧಾರದ ನೇಮಕಾತಿ ಮಾಡಿಕೊಳ್ಳತಕ್ಕದ್ದು.

1. ಈ ಆದೇಶವು ಕಾಡಾ ಪ್ರಾಧಿಕಾರಗಳಲ್ಲಿ ಕ್ರಮಬದ್ಧ ನೇಮಕಾತಿ ಹೊಂದಿ ಸಕ್ರಮ ಸೇವೆಯಲ್ಲಿರುವ ನೌಕರರು ಅವರ ಸೇವಾವಧಿಯಲ್ಲಿ ಮೃತಪಟ್ಟಲ್ಲಿ ಮೃತ ನೌಕರರ ಅವಲಂಬಿತರಿಗೆ ಮಾತ್ರ ಅನ್ವಯಿಸತಕ್ಕದ್ದು.

2. ದಿನಾಂಕ:1.7.1984 ರ ನಂತರ ಸೇವೆಗೆ ಸೇರಿದ ದಿನಗೂಲಿ ನೌಕರರು/ಗುತ್ತಿಗೆ ಆಧಾರದ ಮೇಲಿನ /ಅರೆಕಾಲಿಕಾ ಸೇವಾ ನೌಕರರಿಗೆ ಅನ್ವಯವಾಗುವುದಿಲ್ಲ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ.ಎಲ್. ರಾಮಚಂದ್ರ**
ಸರ್ಕಾರದ ಅಧೀನ ಕಾರ್ಯದರ್ಶಿ (ಪ್ರ),
ಜಲಸಂಪನ್ಮೂಲ ಇಲಾಖೆ (ಕಾಡಾ).

ಪಿ.ಆರ್. 345

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಶ್ರೀ ಪಿ.ಹೆಚ್. ಗಂಗಾಧರರಾವ್ ನಿವೃತ್ತ ಪ್ರಧಾನ ಇಂಜಿನಿಯರ್ ಇವರಿಗೆ ವಿಳಂಬವಾಗಿ ಪಾವತಿಯಾದ ನಿವೃತ್ತಿ ಸೌಲಭ್ಯಗಳಿಗೆ ಬಡ್ಡಿ ನೀಡುವ ಬಗ್ಗೆ

**ಓದಲಾಗಿದೆ:**
1. ಆದೇಶ ಸಂಖ್ಯೆ:ಸಿಆಸುಇ 159 ಸೇಇಮು 2005, ದಿನಾಂಕ: 24.01.2006
2. ಖಜಾನೆ ನಿರ್ದೇಶಕರ ಪತ್ರ ಸಂಖ್ಯೆ: ಖನಿ/ಆವ್ಯ (2)/187/05-06, ದಿನಾಂಕ: 23.02.2006

**ಪ್ರಸ್ತಾವನೆ:**

ಮೇಲೆ ಕ್ರಮ ಸಂಖ್ಯೆ (1) ರಲ್ಲಿ ಓದಲಾದ ಆದೇಶದಲ್ಲಿ ಶ್ರೀ ಪಿ.ಹೆಚ್. ಗಂಗಾಧರರಾವ್ ನಿವೃತ್ತ ಪ್ರಧಾನ ಇಂಜಿನಿಯರ್ ಇವರಿಗೆ ವಿಳಂಬವಾಗಿ ಪಾವತಿಯಾದ ಉಪದಾನ ರೂ.1,65,330-00 ಗಳಿಗೆ ರೂ. 1,37,028-43 ಮತ್ತು ನಿವೃತ್ತ ನಂತರದ ಗಳಿಕೆ ರಜೆ ನಗಧೀಕರಣ ಬಾಬ್ತು ರೂ. 1,15,568-00 ಗಳಿಗೆ ರೂ.1,28,389-65 ಗಳ ಬಡ್ಡಿಯನ್ನು ಮರುಪಾವತಿಸಲು ಆದೇಶಿಸಲಾಗಿತ್ತು.

ಮೇಲೆ ಕ್ರಮಸಂಖ್ಯೆ: (2) ರ ಖಜಾನೆ ನಿರ್ದೇಶಕರ ಪತ್ರದಲ್ಲಿ ಶ್ರೀ ಪಿ.ಹೆಚ್. ಗಂಗಾಧರರಾವ್, ನಿವೃತ್ತ ಪ್ರಧಾನ ಇಂಜಿನಿಯರ್ ಇವರಿಗೆ ವಿಳಂಬವಾಗಿ ಪಾವತಿಯಾದ ಉಪದಾನ ರೂ.1,65,330-00 ಗಳಿಗೆ ನೀಡಿರುವ ಬಡ್ಡಿ ಸರಿಯಾಗಿದೆಯೆಂದು ಆದರೆ ಗಳಿಕೆ ರಜೆ ನಗಧೀಕರಣ ಮೊಬಲಗು ರೂ. 1,15,568-00 ಗಳಿಗೆ ಲೆಕ್ಕಚಾರ ಹಾಕಿ ನೀಡಿರುವ ಬಡ್ಡಿ ಮೊತ್ತ ಸರಿಯಿಲ್ಲವೆಂದು ಆದ್ದರಿಂದ ಗಳಿಕೆ ರಜೆ ನಗಧೀಕರಣ ಬಾಬ್ತು ರೂ. 1,15,568-00 ಗಳಿಗೆ ರೂ. 95,785-00 ಗಳ ಬಡ್ಡಿ ಮಾತ್ರ ಪಾವತಿಸಬೇಕಾಗಿದೆಯೆಂದು ಈ ಬಗ್ಗೆ ಪರಿಶೀಲಿಸಿ ಪರಿಷ್ಕೃತ ಆದೇಶ ನೀಡುವಂತೆ ಕೋರಲಾಗಿದೆ.

**ಸರ್ಕಾರದ ಆದೇಶ ಸಂಖ್ಯೆ:159 ಸೇಇಮು 2005, ಬೆಂಗಳೂರು, ದಿನಾಂಕ: 6ನೇ ಮಾರ್ಚ್ 2006**

ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಿ, ಶ್ರೀ ಪಿ.ಹೆಚ್. ಗಂಗಾಧರರಾವ್ ನಿವೃತ್ತ ಪ್ರಧಾನ ಇಂಜಿನಿಯರ್ ಇವರಿಗೆ ವಿಳಂಬವಾಗಿ ಪಾವತಿಯಾದ ನಿವೃತ್ತ ಸೌಲಭ್ಯಗಳಿಗೆ ಪಾವತಿಸಬಹುದಾದ ಬಡ್ಡಿಯ ಮೊತ್ತ ರೂ.2,32,813-00 (ಎರಡು ಲಕ್ಷದ ಮೂವತ್ತೆರಡು ಸಾವಿರದ ಎಂಟು ನೂರ ಹದಿಮೂರು ರೂಪಾಯಿಗಳು ಮಾತ್ರ) ಗಳನ್ನು ಪಾವತಿಸಲು ಈ ಕೆಳಕಂಡಂತೆ ಪರಿಷ್ಕರಿಸಿದ ಲೆಕ್ಕಾಚಾರದಂತೆ ಇದೇ ಕ್ರಮ ಸಂಖ್ಯೆಯ ದಿನಾಂಕ:24.01.2006 ರ ಆದೇಶ ಪರಿಷ್ಕರಿಸಿ ನೀಡಲು ಮಂಜೂರಾತಿ ನೀಡಲಾಗಿದೆ.

(ಅ) ಉಪದಾನ:ರೂ. 1,65,330-00

| | |
|---|---|
| ದಿನಾಂಕ: 01.04.1998ರಿಂದ 20.08.2003 ವರೆಗೆ ಶೇ. 12 ರಂತೆ (64 ತಿಂಗಳು 20 ದಿನಗಳು) | ರೂ. 1,06,877-88 |
| ದಿನಾಂಕ:21.08.2003 ರಿಂದ 30.11.2005 ವರೆಗೆ ಶೇ. 8 ರಂತೆ (27 ತಿಂಗಳು 11 ದಿನಗಳು) | ರೂ. 30,150-55 |
| **ಒಟ್ಟು** | **ರೂ.1,37,028-43** |

(ಆ) ನಿವೃತ್ತಿ ನಂತರದ ಗಳಿಕೆ ರಜೆ ನಗದೀಕರಣ ರೂ.1,15,562-00

| | |
|---|---|
| ದಿನಾಂಕ:01.04.1998 ರಿಂದ 20.08.2003ವರೆಗೆ ಶೇ.12 ರಂತೆ (64 ತಿಂಗಳು 20ದಿನಗಳು) | ರೂ. 74,709-00 |
| ದಿನಾಂಕ:21.08.2003 ರಿಂದ 30.11.2005ವರೆಗೆ ಶೇ.8 ರಂತೆ (27 ತಿಂಗಳು 11 ದಿನಗಳು) | ರೂ. 21,076-00 |
| **ಒಟ್ಟು** | **ರೂ. 95.785-00** |

(ಅ) ರೂ. 1,37,028-43
(ಆ) ರೂ. 95,785-00

ರೂ. 2,32,813-43 ಅಥವಾ 2,32,813-00

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂಖ್ಯೆ: ಆಇ (ವಿ) 69/06 (ಎ) (ಸಿನಂ.55716) ದಿನಾಂಕ:18.01.2006 ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಯು.ಪಿ. ಪ್ರಭು**
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

ಪಿ.ಆರ್. 346

## ಆಹಾರ ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಸಚಿವಾಲಯ

**ವಿಷಯ:** ನಿರ್ದೇಶಕರು, ಕಾನೂನು ಮಾಪನ ಶಾಸ್ತ್ರ ಇಲಾಖೆ, ಭಾರತ ಸರ್ಕಾರ ನವದೆಹಲಿ, ಇವರು ದಿನಾಂಕ :10.3.2006 ರಂದು ಏರ್ಪಡಿಸಿರುವ ಸಲಹಾ ಆಮಿತಿ ಸಭೆಗೆ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ರವರೊಂದಿಗೆ ಶ್ರೀ ಮೊಹ್ಮದ್ ಜಹಾಂಗೀರ್, ಉಪನಿಯಂತ್ರಕರು (ಆಡಳಿತ) ಕಾನೂನು ಮಾಪನಶಾಸ್ತ್ರ ಇಲಾಖೆ, ಇವರು ಹಾಜರಾಗಲು ಸರ್ಕಾರದ ಅನುಮತಿ ಕುರಿತು ಆದೇಶ.

**ಓದಲಾಗಿದೆ:**
1. ಪ್ಯಾಕ್ಸ್ ಸಂದೇಶ ಸಂಖ್ಯೆ: WM-8(1)/2005 ದಿನಾಂಕ: 6.3.2006. ನಿರ್ದೇಶಕರು ಕಾನೂನು ಮಾಪನಶಾಸ್ತ್ರ ಗ್ರಾಹಕರ ವ್ಯವಹಾರಗಳು, ಆಹಾರ ಮತ್ತು ಸಾರ್ವಜನಿಕ ವಿತರಣಾ ಮಂತ್ರಾಲಯ, ಗ್ರಾಹಕರ ವ್ಯವಹಾರಗಳ ಇಲಾಖೆ, ಕೃಷಿ ಭವನ, ನವದೆಹಲಿ.
2. ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ಇವರ ಪತ್ರ ಸಂಖ್ಯೆ: ಕಾಮಾಇ/ಸಿಬ್ಬಂದಿ-1/ ಸಿಆರ್-251/05-06 ದಿನಾಂಕ:6.3.2006.

**ಪ್ರಸ್ತಾವನೆ:**

ಮೇಲೆ ಓದಲಾದ (1) ರಲ್ಲಿ ಭಾರತ ಸರ್ಕಾರವು ದಿನಾಂಕ:10.3.2006 ರಂದು ಬೆಳಿಗ್ಗೆ 10.00 ಗಂಟೆಗೆ ನಂ.46, ಕೃಷಿ ಭವನ, ನವದೆಹಲಿ (ಗೇಟ್ ನಂ.6) ಮತ್ತು ಅದೇ ದಿನ 2.00 ಗಂಟೆಗೆ ರಾಜ್ಯದ ಪ್ರಮಾಣಬದ್ದ ತೂಕ ಮತ್ತು ಅಳತೆ ಸರಬರಾಜು ಕುರಿತು ಆರ್ಥಿಕ ವರ್ಷಗಳಾದ 2005-06 ಮತ್ತು 2006-07 ರ ಅವಧಿಗೆ ಕುರಿತಂತೆ ಚರ್ಚಿಸುವ ಸಲುವಾಗಿ ಸರ್ಕಾರದ ಕಾರ್ಯದರ್ಶಿಯವರಿಗೆ ಹಾಜರಾಗುವಂತೆ ಕೋರಿರುತ್ತಾರೆ. ನಂತರ ಮೇಲೆ ಓದಲಾದ (2) ರಲ್ಲಿ ನಿಯಂತ್ರಕರು ಕಾನೂನು ಮಾಪನ ಶಾಸ್ತ್ರ ಇಲಾಖೆಯವರು ಸದರಿ ಸಭೆಗೆ ಶ್ರೀ ಮೊಹ್ಮದ್ ಜಹಾಂಗೀರ್, ಉಪನಿಯಂತ್ರಕರು (ಆಡಳಿತ) ರವರು ಕೂಡ ಭಾಗವಹಿಸಲು ಸರ್ಕಾರದ ಅನುಮತಿಯನ್ನು ಕೋರಿರುತ್ತಾರೆ.

ಅದರಂತೆ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆನಾಸ 57 ಇಭತ 2006, ಬೆಂಗಳೂರು, ದಿನಾಂಕ: 7ನೇ ಮಾರ್ಚ್ 2006**

ಭಾರತ ಸರ್ಕಾರವು ದಿನಾಂಕ:10.3.2006 ರಂದು ಬೆಳಿಗ್ಗೆ 10.00 ಗಂಟೆಗೆ ನಂ.46, ಕೃಷಿ ಭವನ, ನವದೆಹಲಿ (ಗೇಟ್ ನಂ.6) ಮತ್ತು ಅದೇ ದಿನ 2.00 ಗಂಟೆಗೆ ರಾಜ್ಯದ ಪ್ರಮಾಣಬದ್ದ ತೂಕ ಮತ್ತು ಅಳತೆ ಸರಬರಾಜು ಕುರಿತು ಆರ್ಥಿಕ ವರ್ಷಗಳಾದ 2005-06 ಮತ್ತು 2006-07 ರ ಅವಧಿಗೆ ಕುರಿತಂತೆ ಚರ್ಚಿಸುವ ಸಲುವಾಗಿ ನಿಯಂತ್ರಕರು, ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು ಹಾಗೂ ಶ್ರೀ ಮೊಹ್ಮದ್ ಜಹಾಂಗೀರ್, ಉಪನಿಯಂತ್ರಕರು (ಆಡಳಿತ) ಕಾನೂನು ಮಾಪನಶಾಸ್ತ್ರ ಇಲಾಖೆ, ಬೆಂಗಳೂರು, ಇವರುಗಳು ವಿಮಾನದಲ್ಲಿ ನವದೆಹಲಿಗೆ ದಿನಾಂಕ:10.3.2006 ರಂದು ಸದರಿ ಸಭೆಗೆ ಹಾಜರಾಗಲು ಸರ್ಕಾರದ ಅನುಮತಿ ನೀಡಿ ಆದೇಶಿಸಿದೆ.

ಮೇಲ್ಕಂಡ ಅಧಿಕಾರಿಗಳು ನಿಯಮಾನುಸಾರ ಪ್ರವಾಸ ಹಾಗೂ ದಿನಭತ್ಯೆಗಳನ್ನು ಪಡೆಯಲು ಅರ್ಹರಿರುತ್ತಾರೆ.

ಈ ಆದೇಶವನ್ನು ಸರ್ಕಾರವು ಪ್ರಧಾನ ಕಾರ್ಯದರ್ಶಿಗಳಿಗೆ ಪ್ರತ್ಯಾಯೋಜಿಸಿದ ಆದೇಶ ಸಂಖ್ಯೆ:ಎಫ್‌ಡಿ 1 ಡಿಎಫ್‌ಪಿ 2003 ದಿನಾಂಕ: 12.6.2003 ರನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎನ್. ವೆಂಕಟಾಚಲಪತಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಆಹಾರ, ನಾಗರೀಕ ಸರಬರಾಜು ಮತ್ತು ಗ್ರಾಹಕರ ವ್ಯವಹಾರಗಳ ಇಲಾಖೆ.

ಪಿ.ಆರ್. 347

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ಸುತ್ತೋಲೆ ಸಂಖ್ಯೆ: ಆಕುಕ 34 ಎಫ್‌ಪಿಆರ್ 2006, ಬೆಂಗಳೂರು, ದಿನಾಂಕ: 14ನೇ ಮಾರ್ಚ್ 2006**

**ವಿಷಯ:** ರಾಜ್ಯದ ಸರ್ಕಾರಿ/ ಖಾಸಗಿ ಆಸ್ಪತ್ರೆಗಳಲ್ಲಿ ಅಕ್ರಮವಾಗಿ ಮಕ್ಕಳನ್ನು ದತ್ತು ನೀಡುತ್ತಿರುವ ಬಗ್ಗೆ

ಕರ್ನಾಟಕ ರಾಜ್ಯದ ಸರ್ಕಾರಿ/ಖಾಸಗಿ ಆಸ್ಪತ್ರೆಗಳಲ್ಲಿ ಅನಾಥ ಮಕ್ಕಳನ್ನು ಅಕ್ರಮವಾಗಿ ದತ್ತು ನೀಡುತ್ತಿರುವುದು ಕಾನೂನು ಬಾಹಿರವಾಗಿರುತ್ತದೆ. ಇದನ್ನು ತಡೆಗಟ್ಟಲು ಸರ್ಕಾರವು ಗಂಭೀರವಾಗಿ ಪರಿಗಣಿಸಿದೆ.

ಇನ್ನು ಮುಂದೆ, ಈ ರೀತಿ ಅಕ್ರಮ ಮತ್ತು ಕಾನೂನು ಬಾಹಿರವಾದ ಪ್ರಕರಣಗಳು ರಾಜ್ಯದಲ್ಲಿ ಮರುಕಳಿಸದಂತೆ ಕಟ್ಟುನಿಟ್ಟಾಗಿ ಎಚ್ಚರಿಕೆ ವಹಿಸಬೇಕೆಂದು ರಾಜ್ಯದ ಎಲ್ಲಾ ಜಿಲ್ಲಾ ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಅಧಿಕಾರಿಗಳಿಗೆ ಸೂಚಿಸಲಾಗಿದೆ. ಹಾಗೂ ಈ ಸಂಬಂಧಪಟ್ಟ ಜಿಲ್ಲೆಯ ಅಧಿಕಾರಿಗಳು ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಂಡು ಸದರಿ ಸೂಚನೆಯನ್ನು ಕಟ್ಟುನಿಟ್ಟಾಗಿ ಪಾಲಿಸಬೇಕು, ತಪ್ಪಿದ್ದಲ್ಲಿ ಸದರಿ ವಿಷಯವನ್ನು ಗಂಭೀರವಾಗಿ ಪರಿಗಣಿಸಲಾಗುವುದೆಂದು ಈ ಮೂಲಕ ತಿಳಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಆರ್. ಲೀಲಾವತಿ**

ಪಿ.ಆರ್. 348

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ

## ಶಿಕ್ಷಣ ಸಚಿವಾಲಯ

**ವಿಷಯ:** ನಬಾರ್ಡ್ ನೆರವಿನ ಆರ್.ಐ.ಡಿ.ಎಫ್. ಯೋಜನೆಯಡಿಯಲ್ಲಿ ಸರ್ಕಾರಿ ಪ್ರಾಥಮಿಕ ಶಾಲಾ ಕೊಠಡಿಗಳ ನಿರ್ಮಾಣಕ್ಕೆ ಬಾಕಿ ಅನುವಾದ ಬಿಡುಗಡೆ ಮಾಡುವ ಬಗ್ಗೆ.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ ಇಡಿ 202 ಯೋಸಕ 2005 ದಿನಾಂಕ:17.5.2005 [ಇಡಿ 15 ಸ್ಕೀಮರ (ಯನಿಕ್) 2005 ದಿನಾಂಕ:17.5.2005]
2. ಮುಖ್ಯ ಕಾರ್ಯನಿರ್ವಾಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್, ಕಾರ್ಯಾಲಯ, ಶಿವಮೊಗ್ಗ ರವರ ಪತ್ರ ಸಂಖ್ಯೆ: ಜಿಪಂಶಿ:ಸಿಬ್ಬಂದಿ (1):ವಿವ:3:05-06 ದಿ.28.2.2006.

**ಪ್ರಸ್ತಾವನೆ:**

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ ಮೇಲೆ ಓದಲಾದ (1) ರ ಸರ್ಕಾರದ ಆದೇಶದಲ್ಲಿ ಶಿವಮೊಗ್ಗ ಜಿಲ್ಲೆ ಪಂಚಾಯತಿಗೆ ನಿಗಧಿ ಪಡಿಸಲಾಗಿದ್ದ ರೂ.33.94 ಲಕ್ಷಗಳನ್ನು ಮುಂದಿನ ಆದೇಶ ಹೊರಡಿಸುವವರೆಗೆ ಖರ್ಚು ಮಾಡದಿರುವಂತೆ ಆದೇಶಿಸಲಾಗಿತ್ತು. ಮೇಲೆ (2) ಓದಲಾದ ಪತ್ರದಲ್ಲಿ ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಜಿಲ್ಲಾ ಪಂಚಾಯತ್ ಕಾರ್ಯಾಲಯ, ಶಿವಮೊಗ್ಗರವರು ಆರ್.ಐ.ಡಿ.ಎಫ್. ಯೋಜನೆಯಡಿಯಲ್ಲಿ ಪ್ರಾಥಮಿಕ ಶಾಲಾ ಕಟ್ಟಡಗಳ ನಿರ್ಮಾಣದ ಕಾಮಗಾರಿಗಳ ಪೈಕಿ ಮೊದಲನೆ ಹಂತದ 7 ಶಾಲಾ ಕಟ್ಟಡಗಳು ಮುಂದುವರೆದ ಕಾಮಗಾರಿಗಳಾಗಿದ್ದು, [ ಪ್ರತಿ ಶಾಲೆಗೆ ರೂ.1.50] ಲಕ್ಷದಂತೆ ರೂ.2.293 ಲಕ್ಷಗಳನ್ನು ಬಿಡುಗಡೆ ಮಾಡಿದ್ದಲ್ಲಿ ಸದರಿ ಕಾಮಗಾರಿಗಳು ಪೂರ್ಣಗೊಳ್ಳುತ್ತದೆ ಎಂದು ತಿಳಿಸಿ 2005-06ನೇ ಸಾಲಿಗೆ ಜಿಲ್ಲಾ ಪಂಚಾಯತ್ ಲಿಂಕ್ ಡಾಕ್ಯುಮೆಂಟ್‌ನಲ್ಲಿ ಒದಗಿಸಲಾಗಿದ್ದ ರೂ.33.94 ಲಕ್ಷಗಲಲ್ಲಿ ಮೇಲ್ಕಂಡ ಮೊತ್ತವನ್ನು ಭರಿಸಲು ಅನುಮತಿ ನೀಡುವಂತೆ ಸರ್ಕಾರವನ್ನು ಕೋರಿರುತ್ತಾರೆ.ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶಿಸಲಾಗಿದೆ.

**ಆದೇಶ ಸಂಖ್ಯೆ: ಇಡಿ:112:ಯೋಸಕಾ 2006, ಬೆಂಗಳೂರು, ದಿನಾಂಕ: 6ನೇ ಮಾರ್ಚ್ 2006**

**[ಇಡಿ:23:ಸ್ಕೀಮರ (ಯುನಿಕ್) 2006 ದಿನಾಂಕ: 6ನೇ ಮಾರ್ಚ್ 2006]**

ನಬಾರ್ಡ್ ಸಂಸ್ಥೆಯ ಆರ್ಥಿಕ ನೆರವಿನ ಆರ್.ಐ.ಡಿ.ಎಫ್.ಯೋಜನೆಯಡಿಯಲ್ಲಿ 2005-06ನೇ ಸಾಲಿಗೆ ಲೆಕ್ಕ ಶೀರ್ಷಿಕೆ 2202-01-800-01-15 ಅಡಿ ಶಿವಮೊಗ್ಗ ಜಿಲ್ಲಾ ಪಂಚಾಯತ್‌ಗೆ ಒದಗಿಸಲಾಗಿದ್ದ ರೂ.33.94 ಲಕ್ಷಗಳ ಪೈಕಿ ಮೊದಲನೇ ಹಂತದ 7 ಕೊಠಡಿಗಳ ನಿರ್ಮಾಣ ಕಾರ್ಯವನ್ನು ಪೂರ್ಣಗೊಳಿಸಲು ರೂ.2.293 ಲಕ್ಷಗಳನ್ನು ಉಪಯೋಗಿಸಿಕೊಳ್ಳಲು ಮುಖ್ಯ ಕಾರ್ಯನಿರ್ವಹಣಾಧಿಕಾರಿಗಳು, ಶಿವಮೊಗ್ಗ ಜಿಲ್ಲಾ ಪಂಚಾಯತ್ ರವರಿಗೆ ಅನುಮತಿ ನೀಡುತ್ತದೆ. ಸದರಿ ಮೊತ್ತವನ್ನು ಡ್ರಾ ಮಾಡುವ ಅಧಿಕಾರವನ್ನು ಸಂಬಂಧಪಟ್ಟ ಜಿಲ್ಲಾ ಪಂಚಾಯತ್ತಿನ ಮುಖ್ಯ ಲೆಕ್ಕಾಧಿಕಾರಿಗಳಿಗೆ ನೀಡಲಾಗಿದೆ. ಕಾಮಗಾರಿಗಳು ಪೂರ್ಣಗೊಂಡ ಬಗ್ಗೆ ವರದಿಯನ್ನು ಆಯುಕ್ತರು, ಸಾರ್ವಜನಿಕ ಶಿಕ್ಷಣ ಇಲಾಖೆ, ಬೆಂಗಳೂರು ಇವರಿಗೆ ನೀಡತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಶ್ರೀಕಂಠೇಶ್ವರ**

ಪಿ.ಆರ್. 349

ವಿಶೇಷಾಧಿಕಾರಿಗಳು ಹಾಗೂ ಪದನಿಮಿತ್ತ

ಸರ್ಕಾರದ ಸಹಕಾರ್ಯದರ್ಶಿ (ಯೋಜನೆ), ಶಿಕ್ಷಣ ಇಲಾಖೆ.

## ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಸಚಿವಾಲಯ

**ವಿಷಯ:** ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ) ಹುದ್ದೆಯನ್ನು ಮುಂದುವರೆಸುವ ಬಗ್ಗೆ

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ:ಡಿಪಿಎಆರ್ 464 ಎಸ್‌ಎಎಸ್ 98 ದಿನಾಂಕ:14.7.99
2. ಸರ್ಕಾರಿ ಆದೇಶ ಸಂಖ್ಯೆ: ಡಿಪಿಎಆರ್ 464 ಎಸ್‌ಎಎಸ್ 98 ದಿನಾಂಕ:22.5.2001.
3. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 37 ಸಸಿವಿ 2004 ದಿನಾಂಕ:19.5.2004.
4. ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 40 ಸಸಿವಿ 2005 ದಿನಾಂಕ:27.6.2005.
5. ಅ.ಟಿ.ಸಂಖ್ಯೆ:ಅಪಜೀ 37 ಇಪಿಸಿ 2003, ದಿ:17.2.2006.

**ಪ್ರಸ್ತಾವನೆ:**

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ) ಹುದ್ದೆಯನ್ನು ಮೇಲೆ ಕ್ರಮ ಸಂಖ್ಯೆ (2) ರಲ್ಲಿ ಓದಲಾದ ದಿನಾಂಕ:22.5.2001 ರ ಸರ್ಕಾರದ ಆದೇಶದಲ್ಲಿ ದಿನಾಂಕ:26.3.2001 ರಿಂದ

ಜಾರಿಗೆ ಬರುವಂತೆ 2 ವರ್ಷಗಳ ಅವಧಿಗೆ ಅಥವಾ ಮುಂದಿನ ಆದೇಶದವರೆಗೆ ಇವುಗಳಲ್ಲಿ ಯಾವುದು ಮೊದಲೋ ಅಲ್ಲಿಯವರೆಗೆ ಮುಂದುವರೆಸಲಾಗಿರುತ್ತದೆ.

ಮೇಲೆ ಕ್ರಮ ಸಂಖ್ಯೆ (5) ರಲ್ಲಿ ಓದಲಾಗಿರುವ ಅನಧಿಕೃತ ಟಿಪ್ಪಣಿಯಲ್ಲಿ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ) ಹುದ್ದೆಯನ್ನು ದಿನಾಂಕ:1.4.2006 ರಿಂದ ಮುಂದುವರೆಸುವಂತೆ ಪ್ರಸ್ತಾವನೆ ಇದೆ.

ಪ್ರಸ್ತುತ ಈ ವಿಸ್ತರಿತ ಅವಧಿಯು ದಿನಾಂಕ:31.3.2006ಕ್ಕೆ ಮುಕ್ತಾಯಗೊಳ್ಳಲಿದೆ. ಆದುದರಿಂದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ) ಹುದ್ದೆಯನ್ನು ದಿನಾಂಕ:1.4.2006 ರಿಂದ ಮುಂದುವರೆಸುವ ಬಗ್ಗೆ ಪರಿಶೀಲಿಸಲಾಗಿದ್ದು, ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ:ಸಿಆಸುಇ 12 ಸಸಿವಿ 2006 ಬೆಂಗಳೂರು, ದಿನಾಂಕ: 28ನೇ ಫೆಬ್ರವರಿ 2006**

ಕರ್ನಾಟಕ ಸರ್ಕಾರ ಸಚಿವಾಲಯದ ಅರಣ್ಯ, ಪರಿಸರ ಮತ್ತು ಜೀವಿಶಾಸ್ತ್ರ ಇಲಾಖೆಯ ಸರ್ಕಾರದ ಕಾರ್ಯದರ್ಶಿ (ಪರಿಸರ ಮತ್ತು ಜೀವಿಶಾಸ್ತ್ರ) ಹುದ್ದೆಯನ್ನು ದಿನಾಂಕ:1.4.2006 ರಿಂದ 31.3.2007 ರವರೆಗೆ ಮುಂದುವರೆಸಲು ಮಂಜೂರಾತಿ ನೀಡಲಾಗಿದೆ.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96, ದಿನಾಮಕ: 10.7.1996 ರಲ್ಲಿ ಆರ್ಥಿಕ ಇಲಾಖೆಯು ಸಹಮತಿ ನೀಡಿದೆ ಎಂದು ಪರಿಭಾವಿಸಿ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಯು.ಪಿ. ಪ್ರಭು**

ಪಿ.ಆರ್. 350

ಸರ್ಕಾರದ ಅಧೀನ ಕಾರ್ಯದರ್ಶಿ

ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ (ಸೇವೆಗಳು-2)

## ಶಿಕ್ಷಣ ಸಚಿವಾಲಯ

**ತಿದ್ದುಪಡಿ ಸಂಖ್ಯೆ: ಇಡಿ 211ಇಟಿಆರ್ 2005 ಬೆಂಗಳೂರು, ದಿನಾಂಕ: 10ನೇ ಮಾರ್ಚ್ 2006**

ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ :ಇಡಿ 211 ಇಟಿಆರ್ 2005, ದಿ.18.01.2006 ರ ಅಧಿಕೃತ ಜ್ಞಾಪನದಲ್ಲಿ 2006-07ನೇ ಸಾಲಿನಿಂದ ಹಾಗೂ ನಂತರ ಅನ್ವಯಿಸುವ ಸರ್ಕಾರಿ ಪ್ರಾಥಮಿಕ ಮತ್ತು ಪ್ರೌಢಶಾಲಾ ಶಿಕ್ಷಕರ ವರ್ಗಾವಣೆಯನ್ನು ಕೌನ್ಸಿಲಿಂಗ್ ಮೂಲಕ ಮಾಡುವ ಮಾರ್ಗಸೂಚಿಗಳನ್ನು ಹೊರಡಿಸಲಾಗಿದೆ. ಈ ಮಾರ್ಗಸೂಚಿಯಲ್ಲಿನ ಕಂಡಿಕೆ 3.1 ರಲ್ಲಿ ಎಲ್ಲಾ ಸರ್ಕಾರಿ ಶಾಲೆಗಳನ್ನು ಈ ಕೆಳಕಂಡಂತೆ ಎ,ಬಿ,ಸಿ, ಮತ್ತು ಡಿ ವರ್ಗಗಳಾಗಿ ವರ್ಗೀಕರಿಸಲಾಗಿದೆ.

| ಕ್ಷೇತ್ರ | ಶಾಲೆಯ ವರ್ಗ | ವರ್ಗೀಕರಣದ ಮಾನದಂಡ | ಪ್ರತಿ ವರ್ಷದ ಪೂರ್ಣ ಸೇವೆಗೆ ನಿಗದಿಪಡಿಸಿದ ಪ್ರಾದೇಶಿಕ ಕೃಪಾಂಕಗಳು (Weightage) |
|---|---|---|---|
| ಗ್ರಾಮಾಂತರ ಪ್ರದೇಶ | ಎ ವರ್ಗ | ರಾಷ್ಟ್ರೀಯ ಹೆದ್ದಾರಿ (ಎನ್. ಹೆಚ್.), ರಾಜ್ಯ ಹೆದ್ದಾರಿ (ಎಸ್. ಹೆಚ್.) ಅಥವಾ ಪ್ರಮುಖ ಜಿಲ್ಲಾ ರಸ್ತೆ (ಎಂ.ಡಿ.ಆರ್.)ಗಳ ಹೊರತಾದ, ರಸ್ತೆಗಳಲ್ಲಿದ್ದು ಹಳ್ಳಿಯಿಂದ ಕನಿಷ್ಠ 2 ಕಿ.ಮೀ ರವರೆಗೆ ಬಸ್ ಸೌಲಭ್ಯವಿಲ್ಲದಿರುವ ಶಾಲೆಗಳು | 2.00 |
| | ಬಿ ವರ್ಗ | ಎನ್.ಹೆಚ್., ಎಸ್.ಹೆಚ್., ಎಂ.ಡಿ.ಆರ್. ರಸ್ತೆಗಳ ಹೊರತಾದ ಇತರೆ ರಸ್ತೆಗಳ ಪಕ್ಕದಲ್ಲಿದ್ದು, 2 ಕಿ.ಮೀ ರವರೆಗೆ ಬಸ್ ಸೌಲಭ್ಯವಿಲ್ಲದಿರುವ ಶಾಲೆಗಳು | 1.75 |
| | ಸಿ ವರ್ಗ | ಎನ್. ಹೆಚ್. ಎಸ್.ಹೆಚ್., ಎಂ.ಡಿಆರ್. ರಸ್ತೆಗಳಿಂದ 2 ಕಿ.ಮೀ ಒಳಗೆ ಇರುವಂತಹ ಶಾಲೆಗಳು | 1.25 |
| ನಗರ ಪ್ರದೇಶ | ಡಿ ವರ್ಗ | ನಗರ ಪ್ರದೇಶಗಳಿಂದ 5 ಕಿ.ಮೀ. ವರೆಗೆ (ಜಿಲ್ಲೆ ಮತ್ತು ರಾಜ್ಯ ಕೇಂದ್ರಗಳಲ್ಲದೆ ಅಥವ ಜಿಲ್ಲಾ ಕೇಂದ್ರಗಳಿಂದ 10 ಕಿ.ಮೀ. ಮತ್ತು ಬೆಂಗಳೂರು ನಗರದಿಂದ 20 ಕಿ.ಮೀ. ಒಳಗಿರುವ ಶಾಲೆಗಳು | 1.00 |

2. ಈ ಮೇಲಿನ ಎ, ಬಿ, ಸಿ ಮತ್ತು ಡಿ ವರ್ಗಗಳನ್ನು ತಿದ್ದುಪಡಿ ಮಾಡಿ ಎ, ಬಿ, ಸಿ ಮತ್ತು ಡಿ ವರ್ಗಗಳ ಬದಲಾಗಿ ಎ, ಬಿ ಮತ್ತು ಸಿ ವರ್ಗಗಳಾಗಿ ಮಾತ್ರ ಈ ಕೆಳಕಂಡಮತೆ ತಿದ್ದುಪಡಿ ಮೂಲಕ ವರ್ಗೀಕರಿಸಲಾಗಿದೆ.

| ಕ್ಷೇತ್ರ | ಶಾಲೆಯ ವರ್ಗ | ವರ್ಗೀಕರಣದ ಮಾನದಂಡ | ಪ್ರತಿ ವರ್ಷದ ಪೂರ್ಣ ಸೇವೆಗೆ ನಿಗದಿಪಡಿಸಿದ ಪ್ರಾದೇಶಿಕ ಕೃಪಾಂಕಗಳು (Weightage) |
|---|---|---|---|
| ಗ್ರಾಮಾಂತರ ಪ್ರದೇಶ | ಸಿ ವರ್ಗ | ಎ ಮತ್ತು ಬಿ ವರ್ಗದ ಪ್ರದೇಶಗಳನ್ನು ಹೊರತುಪಡಿಸಿ ಇನ್ನುಳಿದ ಎಲ್ಲಾ ಗ್ರಾಮಾಂತರ ಪ್ರದೇಶಗಳು | 2.00 |
| | ಬಿ ವರ್ಗ | ಬೆಂಗಳೂರು ನಗರದ ಗಡಿಯಿಂದ 20 ಕಿ.ಮೀ., ಇತರ ಮಹಾನಗರ ಪಾಲಿಕೆಗಳ ಗಡಿಯಿಂದ 15 ಕಿ.ಮೀ., ಜಿಲ್ಲಾ ಕೇಂದ್ರ ಸ್ಥಾನಗಳು, ನಗರ ಪಾಲಿಕೆಗಳ ಗಡಿಯಿಂದ 10 ಕಿ.ಮೀ., ಇತರೆ ನಗರಸಭೆ, ಪುರಸಭೆ, ಪಟ್ಟಣ ಪಂಚಾಯತ್, ಅಧಿಸೂಚಿತ ಪ್ರದೇಶ, ತಾಲ್ಲೂಕು ಕೇಂದ್ರ ಸ್ಥಾನಗಳ ಗಡಿಯಿಂದ 5 ಕಿ.ಮೀ ಒಳಗಿನ ಪ್ರದೇಶಗಳು | 1.50 |
| ನಗರ ಪ್ರದೇಶ | ಎ ವರ್ಗ | ಎಲ್ಲಾ ಮಹಾನಗರ ಪಾಲಿಕೆಗಳ ನಗರ ಪಾಲಿಕೆ, ನಗರ ಸಭೆ, ಪುರಸಭೆ, ಪಟ್ಟಣ ಪಂಚಾಯತ್, ಅಧಿಸೂಚಿತ ಪ್ರದೇಶ ಇತ್ಯಾದಿಗಳು ಪಟ್ಟಣ ಪ್ರದೇಶ ಹಾಗೂ ತಾಲ್ಲೂಕು ಕೇಂದ್ರಗಳ ವ್ಯಾಪ್ತಿ ಸರಹದ್ದಿನ ಒಳಗಿನ ಪ್ರದೇಶಗಳು. | 1.00 |

ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆ ಇವರು ಮೇಲೆ ಓದಲಾದ (8)ರ ಪತ್ರದಲ್ಲಿ ಹೊಸದಾಗಿ ಸೃಜಿಸಲಾದ ಈ ಹುದ್ದೆಗಳು ವೃಂದ ಮತ್ತು ನೇಮಕಾತಿ ನಿಯಮಗಳಲ್ಲಿ ಸೇರದೆ ಇರುವುದರಿಂದ ಮತ್ತು ಖಾಲಿ ಇರುವ ಸದರಿ ಹುದ್ದೆಗಳನ್ನು ಭರ್ತಿ ಮಾಡದೇ ಇರುವುದರಿಂದ ನೇಮಕಾತಿ ವಿಧಾನವನ್ನು ಗೊತ್ತುಪಡಿಸಿ ಸದರಿ ಹುದ್ದೆಗಳನ್ನು ಭರ್ತಿ ಮಾಡಲು ಕಾರ್ಯಕಾರಿ ಆದೇಶ ಹೊರಡಿಸಬೇಕೆಂದು ಕೋರಿದ್ದಾರೆ. ಮೇಲೆ ಓದಲಾದ (7)ರ ಅಧಿಕೃತ ಜ್ಞಾಪನದಲ್ಲಿ ವೃಂದ ಮತ್ತು ನೇಮಕಾತಿ ನಿಯಮದಲ್ಲಿ ನೇಮಕಾತಿ ವಿಧಾನವನ್ನು ನಿಗದಿಪಡಿಸದೇ ಇರುವ ಹುದ್ದೆಗಳಿಗೆ ಕಲ್ಪಿಸಿರುವ ಅವಕಾಶಗಳನ್ನು ಉಪಯೋಗಿಸಿ ಸದರಿ ಪತ್ರಾಂಕಿತ ಸಹಾಯಕರ ಹುದ್ದೆಗಳಿಗೆ ಒಂದು ಕಾರ್ಯಕಾರಿ ಆದೇಶವನ್ನು ಹೊರಡಿಸಿ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರ ತೀರ್ಮಾನಿಸಿ ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 13 ಪಿಐಎಂ 2005, ಬೆಂಗಳೂರು, ದಿನಾಂಕ: 16/28ನೇ ಫೆಬ್ರವರಿ 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಭಾರತೀಯ ವೈದ್ಯ ಪದ್ಧತಿ ಮತ್ತು ಹೋಮಿಯೋಪತಿ ಇಲಾಖೆಯಲ್ಲಿನ ವೇತನ ಶ್ರೇಣಿ ರೂ.5575-10620ರ ಪತ್ರಾಂಕಿತ ಸಹಾಯಕರ ಹುದ್ದೆಗಳಿಗೆ ಮೇಲೆ (7) ರಲ್ಲಿ ಓದಲಾದ ಅಧಿಕೃತ ಜ್ಞಾಪನಾ ಪತ್ರ ಹಾಗೂ ಅದರಲ್ಲಿನ ಷರತ್ತು ಮತ್ತು ನಿಬಂಧನೆಗೊಳಪಟ್ಟು ಈ ಆದೇಶಕ್ಕೆ ಲಗತ್ತಿಸಿರುವ ಅನುಬಂಧದಲ್ಲಿರುವಂತೆ ಪತ್ರಾಂಕಿತ ಸಹಾಯಕರ ಹುದ್ದೆಗೆ ನೇಮಕಾತಿ ವಿಧಾನವನ್ನು ತಕ್ಷಣದಿಂದ ಜಾರಿಗೆ ಬರುವಂತೆ ನಿಗದಿಪಡಿಸಿದೆ. ಈ ಆದೇಶದಲ್ಲಿ ಗೊತ್ತಪಡಿಸಿದ ನೇಮಕಾತಿ ವಿಧಾನವು ಆದೇಶ ಹೊರಡಿಸಿದ ದಿನಾಂಕದಿಂದ ಆರು ತಿಂಗಳ ಅವಧಿಗೆ ಜಾರಿಯಲ್ಲಿರುತ್ತದೆ.

ಈ ಆದೇಶವನ್ನು ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆಯ ಟಿಪ್ಪಣಿ ಸಂಖ್ಯೆ: ಸಿಆಸುಇ.102.ಸೇನಿಡಿ.2005, ದಿನಾಂಕ:16.1.2006ರ ಸಹಮತಿಯೊಂದಿಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಡಿ.ಬಿ. ಗಣಾಚಾರಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 13 ಪಿಐಎಂ 2005, ಬೆಂಗಳೂರು, ದಿನಾಂಕ: 16ನೇ ಫೆಬ್ರವರಿ 2006ಕ್ಕೆ ಅನುಬಂಧ**

| ಕ್ರ. ಸಂ. | ಹುದ್ದೆಗಳ ದರ್ಜೆ ಮತ್ತು ವೇತನ ಶ್ರೇಣಿ | ನೇಮಕಾತಿ ವಿಧಾನ | ಕನಿಷ್ಠ ವಿದ್ಯಾರ್ಹತೆ |
|---|---|---|---|
| 1. | ಪತ್ರಾಂಕಿತ ಸಹಾಯಕರು ವೇನ ಶ್ರೇಣಿ ರೂ.5575-10620 | ಅಧೀಕ್ಷಕರ ವೃಂದದಿಂದ ಪದೋನ್ನತಿಯ ಮೂಲಕ | ಅಧೀಕ್ಷಕರ ವೃಂದದಲ್ಲಿ ಕನಿಷ್ಠ 5 ವರ್ಷಗಳ ಸೇವೆಯನ್ನು ಪೂರೈಸಿರಬೇಕು. |

**ಡಿ.ಬಿ. ಗಣಾಚಾರಿ**

ಪಿ.ಆರ್. 362

ಸರ್ಕಾರದ ಅಧೀನ ಕಾರ್ಯದರ್ಶಿ,

ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಸಚಿವಾಲಯ

**ವಿಷಯ:** ಕರ್ನಾಟಕ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖಾ ಸೇವೆಗಳ ಜಂಟಿ ನಿರ್ದೇಶಕರ ಹುದ್ದೆಯನ್ನು ಮರು ಪದನಾಮಗೊಳಿಸುವ ಕುರಿತು.

**ಓದಲಾಗಿದೆ:**
1. ಅಧಿಸೂಚನೆ ಸಂ: ಎಸ್‌ಡಬ್ಲ್ಯೂಎಲ್: 60 ಎಸ್‌ಜೆಡಿ 1986, ದಿ: 13.9.1991.
2. ಸರ್ಕಾರದ ಆದೇಶ ಸಂ: ಸಿಆಸುಇ:16:ಆಸೇವ:004, ದಿ:16.2.2004.
3. ಅಧಿಸೂಚನೆ ಸಂ:ಸಿಆಸುಇ:23:ಅಸೇವ:2005(1) ದಿ:28.9.2005.
4. ಆಯುಕ್ತರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರ ಪತ್ರ ಸಂ: ನಿಸಿಗೆ:81:2005-2006, ದಿ: 11.10.2005

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮಾಂಕ(1) ರಲ್ಲಿನ ದಿ: 13.9.1991ರ ಅಧಿಸೂಚನೆಯಲ್ಲಿ ಕರ್ನಾಟಕ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಸೇವೆಗಳ ರೂ.10620-14960 ವೇತನ ಶ್ರೇಣಿಯ ಜಂಟಿ ನಿರ್ದೇಶಕರ ಹುದ್ದೆಯು ಅಸ್ತಿತ್ವದಲ್ಲಿರುತ್ತದೆ.

ಮೇಲೆ ಓದಲಾದ ಕ್ರಮಾಂಕ (2) ರಲ್ಲಿನ ದಿ:16.2.2004ರ ಆದೇಶಲ್ಲಿ ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್) ವೃಂದದ ಹುದ್ದೆಗಳನ್ನು 45ಕ್ಕೆ ಹೆಚ್ಚಿಸಿ ಈ ವೃಂದದ ವೇತನ ಶ್ರೇಣಿಯನ್ನು ಸರ್ಕಾರದ ಅಪರಕಾರ್ಯದರ್ಶಿ ಹುದ್ದೆಯ ವೇತನ ಶ್ರೇಣಿಯ ರೂ.13820-17220 ಕ್ಕೆ ನಿಗದಿಪಡಿಸಲಾಗಿದೆ.

ಮೇಲೆ ಓದಲಾದ ಕ್ರಮಾಂಕ(3)ರಲ್ಲಿನ ದಿ:28.9.2005ರ ಅಧಿಸೂಚನೆಯಲ್ಲಿ ಶ್ರೀ ಎಸ್. ಪುಟ್ಟಸ್ವಾಮಿ (ಸೂಪರ್ ಟೈಂ ಸ್ಕೇಲ್) ಇವರನ್ನು ಜಂಟಿ ನಿರ್ದೇಶಕರು (ಆಡಳಿತ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ, ಬೆಂಗಳೂರು ಇಲ್ಲಿಗೆ ಸ್ಥಳನಿಯುಕ್ತಿಗೊಳಿಲಾಗಿದೆ.

ಮೇಲೆ ಓದಲಾದ ಕ್ರಮಾಂಕ (4) ರಲ್ಲಿನ ದಿ: 11.10.2005ರ ಪತ್ರದಲ್ಲಿ ಶ್ರೀ ಎಸ್. ಪುಟ್ಟಸ್ವಾಮಿ, ಜಂಟಿ ನಿರ್ದೇಶರು (ಆಡಳಿತ) ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ ಇವರು, ಕೆ.ಎ.ಎಸ್. (ಸೂಪರ್ ಟೈಂ ಸ್ಕೇಲ್ ವೃಂದದ ಅಧಿಕಾರಿಯಾಗಿರುವುದರಿಂದ ಇವರನ್ನು ಪ್ರಸ್ತುತ ಹೊಂದಿರುವ ಜಂಟಿ ನಿರ್ದೇಶಕರು (ಆಡಳಿತ) ಹುದ್ದೆಯನ್ನು ಇವರು ಕಾರ್ಯನಿರ್ವಹಿಸುವವರೆಗೂ ಚಾಲ್ತಿಯಲ್ಲಿರುವಂತೆ ಅಪರ ನಿರ್ದೇಶಕರು (ಆಡಳಿತ) ಎಂಬುದಾಗಿ ಮರು ಪದನಾಮಕರಣ ಮಾಡಿ ಆದೇಶ ಹೊರಡಿಸಲು ಆಯುಕ್ತರು, ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆರವರು ಕೋರಿರುತ್ತಾರೆ.

ಪ್ರಸ್ತಾವನೆಯನ್ನು ಕೂಲಂಕುಷವಾಗಿ ಪರಿಶೀಲಿಸಿದ್ದು, ಈ ಕೆಳಗೆ ಸೂಚಿಸಿದಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂ:ಮಮಇ 475 ಎಸ್‌ಜೆಡಿ 2005, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2006**

ಅಧಿಸೂಚನೆ ಸಂ: ಎಸ್‌ಡಬ್ಲ್ಯೂಎಲ್ 60 ಎಸ್‌ಜೆಡಿ 1986(1) ದಿ:13.9.1991ರಲ್ಲಿ ಕರ್ನಾಟಕ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆಯ ಸೇವೆಗಳ ವೃಂದಬಲಗಳ ಸೂಚಿಸಿರುವ ರೂ.10620-14960ರ ವೇತನ ಶ್ರೇಣಿಯ ಜಂಟಿ ನಿರ್ದೇಶಕರು (ಆಡಳಿತ) ಹುದ್ದೆಯನ್ನು ಶ್ರೀ ಎಸ್. ಪುಟ್ಟಸ್ವಾಮಿ, ಕೆ.ಎ.ಎಸ್ (ಸೂಪರ್ ಟೈಂ ಸ್ಕೇಲ್) ಇವರು ಈ ಹುದ್ದೆಯಲ್ಲಿ ಕಾರ್ಯ ನಿರ್ವಹಿಸುವವರೆಗೆ ತಾತ್ಕಾಲಿಕವಾಗಿ ರೂ. 13820-17220ರ ವೇತನ ಶ್ರೇಣಿಯ ಪರ ನಿರ್ದೇಶಕರು (ಆಡಳಿತ) ಎಂದು ಮರು ಪದನಾಮೀಕರಿಸಲಾಗಿದೆ.

ಆದೇಶವನ್ನು ಅನಧಿಕೃತ ಟಿಪ್ಪಣಿ. ಸಂ:ಆಇ: 224:ವೆಚ್ಚ-3:2005. ದಿ:17.2.2006 ರಲ್ಲಿ ಆರ್ಥಿಕ ಇಲಾಖೆ ನೀಡಿರುವ ಸಹಮತಿ ಅನ್ವಯ ಹೊರಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ವಿ. ಶಿವಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ ಇಲಾಖೆ.

ಪಿ.ಆರ್. 366

## ಆರ್ಥಿಕ ಸಚಿವಾಲಯ

**ವಿಷಯ:** 2005-06ನೇ ಸಾಲಿನ ನಗರ ಆಶ್ರಯ ಯೋಜನೆಯಡಿ ಹುಡ್ಕೋ ಸಂಸ್ಥೆಯಿಂದ ರೂ.45.00 ಕೋಟಿ ಸಾಲ ಪಡೆಯಲು ಸರ್ಕಾರದ ಖಾತರಿ ಬಗ್ಗೆ.

**ಓದಲಾಗಿದೆ:** 1. ವ್ಯವಸ್ಥಾಪಕ ನಿರ್ದೇಶಕರು, ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ.ನಿ. ರವರ ಪತ್ರ ಸಂ. MD/RGRHCL/ 07/FIN/ 2005, ದಿನಾಂಕ:6.4.2005.

**ಪ್ರಸ್ತಾವನೆ:**

ಮೇಲೆ ಓದಲಾದ ರಾಜೀವ್ ಗಾಂಧಿ ಗ್ರಾಮೀಣ ವಸತಿ ನಿಗಮ ನಿಯಮಿತರವರ ಪತ್ರದಲ್ಲಿ 2003-04ನೇ ಸಾಲಿನ ನಗರ ಆಶ್ರಯ ಯೋಜನೆಯ ಅನುಷ್ಠಾನಕ್ಕಾಗಿ ಹುಡ್ಕೋ ಸಂಸ್ಥೆಯಿಂದ ರೂ.45.00 ಕೋಟಿಗಳನ್ನು ಸಾಲ ಪಡೆಯಲು ಸರ್ಕಾರದ ಖಾತ್ರಿ ನೀಡುವಂತೆ ಕೋರಿರುತ್ತಾರೆ.

ಸದರಿ ಪ್ರಸ್ತಾವನೆಯನ್ನು ಪರಿಶೀಲಿಸಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಸರ್ಕಾರದ ಆದೇಶ ಸಂ.ವಇ:06 ಹೆಚ್‌ಎಹೆಚ್ 2005, ಬೆಂಗಳೂರು, ದಿನಾಂಕ: 21ನೇ ಫೆಬ್ರವರಿ 2006**

ಮೇಲೆ ವಿವರಿಸಲಾದ ಹಿನ್ನೆಲೆಯಲ್ಲಿ 2005-06ನೇ ಸಾಲಿನಲ್ಲಿ ನಗರ ಆಶ್ರಯ ವಸತಿ ಯೋಜನೆಯ ಅನುಷ್ಠಾನಕ್ಕಾಗಿ ರೂ.45.00 ಕೋಟಿಗಳನ್ನು (ರೂ.ನಲವತ್ತೈದು ಕೋಟಿಗಳು) ಹುಡ್ಕೋ ಸಂಸ್ಥೆಯಿಂದ ಸಾಲ ಪಡೆಯಲು ಸರ್ಕಾರದ ಖಾತರಿಯನ್ನು ಈ ಕೆಳಕಂಡ ನಿಬಂಧನೆಗಳಿಗೆ ಒಳಪಟ್ಟು ನೀಡಲಾಗಿದೆ.

1. ಗ್ಯಾರಂಟಿ ಕಮೀಷನ್ನಿನ ಶೇ1ರಷ್ಟನ್ನು ಸರ್ಕಾರಕ್ಕೆ ತಪ್ಪದೇ ಭರಿಸುವುದು.
2. ಬಡ್ಡಿ ದರವು ಸ್ಪರ್ಧಾತ್ಮಕವಾಗಿರತಕ್ಕದ್ದು.
3. ಟಿ.ಬಿ. ನಿಯಮಗಳನ್ನು ಪಾಲಿಸತಕ್ಕದ್ದು.
4. ಸಾಲದ ನಿಬಂಧನೆಗಳನ್ನು ಆರ್ಥಿಕ ಇಲಾಖೆಯ ಗಮನಕ್ಕೆ ತರತಕ್ಕದ್ದು.

ಈ ಆದೇಶವನ್ನು ಆರ್ಥಿಕ ಇಲಾಖೆಯ ಟಿಪ್ಪಣಿ ಸಂ.ಎಫ್‌ಡಿ/257/ವೆಚ್ಚ-9/2005), ದಿನಾಂಕ:16.2.2006ರಲ್ಲಿ ನೀಡಿರುವ ಸಹಮತಿಯನ್ವಯ ಹೊರಡಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್. ಇಂದುಮತಿ**
ಪೀಠಾಧಿಕಾರಿ-2, ಆರ್ಥಿಕ ಇಲಾಖೆ.

ಪಿ.ಆರ್. 372

## ಕಾನೂನು ನ್ಯಾಯ ಮತ್ತು ಮಾನವ ಸಚಿವಾಲಯ

**ವಿಷಯ:** ಶ್ರೀ ಎಸ್.ಕೆ. ಕುಂಬರೇಶ್ ಬಾಬು, ವಕೀಲರು, ಸಕಲೇಶಪುರ ಹಾಸನ ಜಿಲ್ಲೆ, ಇವರನ್ನು ಸಕಲೇಶಪುರ ಕಂದಾಯ ತಾಲ್ಲೂಕಿನ ನೋಟರಿಯಾಗಿ ನೇಮಿಸುವ ಕುರಿತು.

**ಓದಲಾಗಿದೆ:**
1. ಸರ್ಕಾರಿ ಆದೇಶ ಸಂಖ್ಯೆ: ಲಾ 46 ಎಲ್‌ಸಿಎಲ್ 04 ದಿನಾಂಕ: 18.1.2005.
2. ಸರ್ಕಾರಿ ಪತ್ರ ಸಂಖ್ಯೆ: ಲಾ 91 ಎಲ್‌ಸಿಎಲ್ 05 ದಿನಾಂಕ: 5.4.2005.
3. ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರ ಪತ್ರ, ದಿನಾಂಕ: 1.8.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ದಿನಾಂಕ: 18.1.2005ರ ಆದೇಶದಲ್ಲಿ ಶ್ರೀಮತಿ ಬಿ. ನಾಗಸುಂದರಮ್ಮ, ನೋಟರಿ, ಹಾಸನ ಇವರ ರಾಜೀನಾಮೆಯನ್ನು ಅಂಗೀಕರಿಸಲಾಗಿದೆ. ಸದರಿ ಹುದ್ದೆಯ ನೇಮಕಾತಿಗೆ ಮೇಲೆ (2)ರಲ್ಲಿ ಓದಲಾದ ದಿನಾಂಕ: 5.4.2005ರ ಪತ್ರದಲ್ಲಿ ಅರ್ಜಿಗಳನ್ನು ಆಹ್ವಾನಿಸಿ ಪ್ರಸ್ತಾವನೆ ಸಲ್ಲಿಸುವಂತೆ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರನ್ನು ಕೋರಲಾಗಿದೆ. ಅದರನ್ವಯ ಮೇಲೆ (3)ಲ್ಲಿ ಓದಲಾದ ದಿನಾಂಕ: 1.8.2005ರ ಪತ್ರದಲ್ಲಿ ಪ್ರಧಾನ ಜಿಲ್ಲಾ ಮತ್ತು ಸತ್ರ ನ್ಯಾಯಾಧೀಶರು, ಹಾಸನ ಇವರು ಅರ್ಜಿಗಳೊಂದಿಗೆ ಪ್ರಸ್ತಾವನೆ ಸಲ್ಲಿಸಿರುತ್ತಾರೆ. ಅದನ್ನು ಪರಿಶೀಲಿಸಿ ಕೆಳಕಂಡಂತೆ ಆದೇಶಿಸಲಾಗಿದೆ.

**ಸರ್ಕಾರದ ಆದೇಶ ಸಂ. ಲಾ 91 ಎಲ್‌ಸಿಎಲ್ 2005, ಬೆಂಗಳೂರು, ದಿನಾಂಕ: 24ನೇ ಫೆಬ್ರವರಿ 2006**

ನೋಟರಿ ನಿಯಮಗಳ (1956) ನಿಯಮ 8(1)ರಲ್ಲಿ ಪ್ರದತ್ತವಾಗಿರುವ ಅಧಿಕಾರ ಚಲಾಯಿಸಿ, ನೋಟರಿ ಅಧಿನಿಯಮ (1952) ಹಾಗೂ ಅದರ ಅಡಿಯಲ್ಲಿ ರಚಿಸಲಾಗಿರುವ ನಿಯಮಗಳ ರೀತ್ಯ ಶ್ರೀ ಎಸ್.ಕೆ. ಕುಂಬರೇಶ ಬಾಬು, ವಕೀಲರು, ಬಿನ್ ಎಸ್.ಕೆ. ಕೃಷ್ಣಯ್ಯ ನಾಯ್ಡು, ಅಜಾದ್ ರಸ್ತೆ, ಸಕಲೇಶಪುರ ಟೌನ್, ಹಾಸನ ಜಿಲ್ಲೆ ಇವರನ್ನು ವೃತ್ತಿ ಪ್ರಮಾಣ ಪತ್ರ ನೀಡಲಾದ ದಿನಾಂಕದಿಂದ ಐದು ವರ್ಷಗಳ ಅವಧಿಗೆ ಸಕಲೇಶಪುರ ಕಂದಾಯ ತಾಲ್ಲೂಕಿನ ನೋಟರಿಯನ್ನಾಗಿ ನೇಮಸಿದೆ.

ಸದರಿ ವಕೀಲರು ಲೆಕ್ಕ ಶೀರ್ಷಿಕೆ 0070-ಇತರೆ ಆಡಳಿತಾತ್ಮಕ ಸೇವೆಗಳು-01-ನ್ಯಾಯ ಪರಿಪಾಲನೆ-501-0 ಇತರೆ ಸ್ವೀಕೃತಿಗಳು-06 ಇತರೆ ಬಾಬುಗಳಿಗೆ (0070-01-501-0-06) ಸರ್ಕಾರಿ ಖಜಾನೆಯಲ್ಲಿ ನಿಗದಿಪಡಿಸಲಾದ ರೂ.1000 (ಒಂದು ಸಾವಿರಗಳು ಮಾತ್ರ) ಶುಲ್ಕವನ್ನು ಜಮಾ ಮಾಡಿ ಆ ಬಗೆಗಿನ ಮೂಲ ಚಲನ್ ಮತ್ತು ಹುಟ್ಟಿದ ದಿನಾಂಕವನ್ನು ದೃಢೀಕರಿಸಬಲ್ಲ ದಾಖಲೆಯನ್ನು ಹಾಜರುಪಡಿಸಿದ ನಂತರ ಸದರಿಯವರಿಗೆ ವೃತ್ತಿ ಪ್ರಮಾಣ ಪತ್ರ ನೀಡಲಾಗುವುದು.

ತದನಂತರ ಶ್ರೀಯುತರ ಹೆಸರನ್ನು ನೋಟರಿ ಅಧಿನಿಯಮ (1952)ರ ಕಲಂ ಕಾಯ್ದೆಯ ಅಧಿನಿಯಮ 4ನೇ ಪ್ರಕರಣದಡಿ ಸರ್ಕಾರ ನಿರ್ವಹಿಸುತ್ತಿರುವ ರಿಜಿಸ್ಟರ್‌ನಲ್ಲಿ ನಮೂದಿಸಲಾಗುವುದು.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,
**ಶಕುಂತಲ ಹೆಚ್.ಆರ್.**
ಸರ್ಕಾರದ ಅಧೀನ ಕಾರ್ಯದರ್ಶಿ (ಆಡಳಿತ-2),
ಕಾನೂನು ನ್ಯಾಯ ಮತ್ತು ಮಾನವ ಹಕ್ಕುಗಳ ಇಲಾಖೆ.

ಪಿ.ಆರ್. 373

## ಆರ್ಥಿಕ ಸಚಿವಾಲಯ

**ವಿಷಯ :** ತಾತ್ಕಾಲಿಕ ಪರಿಹಾರ ಮಂಜೂರಾತಿ.

**ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 8 ಎಸ್‌ಆರ್‌ಪಿ 2006, ಬೆಂಗಳೂರು, ದಿನಾಂಕ: 29ನೇ ಮಾರ್ಚ್, 2006**

ರಾಜ್ಯ ಸರ್ಕಾರಿ ನೌಕರರ, ಅನುದಾನಿತ ಶಿಕ್ಷಣ ಸಂಸ್ಥೆಗಳ ಮತ್ತು ಸ್ಥಳೀಯ ಸಂಸ್ಥೆಗಳ ನೌಕರರ ಹಾಗೂ ವಿಶ್ವವಿದ್ಯಾನಿಲಯಗಳ ಬೋಧಕೇತರ ಸಿಬ್ಬಂದಿಗಳ ವೇತನ ಶ್ರೇಣಿಗಳನ್ನು ಪರಿಷ್ಕರಿಸಲು ಮತ್ತು ನೂತನ ವೇತನ ರಚನೆ ಇತ್ಯಾದಿಗಳನ್ನು ರೂಪಿಸಲು, ಸರ್ಕಾರವು 5ನೇ ವೇತನ ಆಯೋಗವನ್ನು ರಚಿಸಿದೆ. 5ನೇ ವೇತನ ಆಯೋಗವು ತನ್ನ ಅಂತಿಮ ವರದಿಯನ್ನು ಸಲ್ಲಿಸುವುದನ್ನು ಕಾಯ್ದಿರಿಸಿ, ಮಾಸಿಕ ಕನಿಷ್ಠ ರೂ.300/- ಮತ್ತು ಗರಿಷ್ಠ ರೂ.1500/-ಗಳ ಮಿತಿಗೊಳಪಟ್ಟು ಮೂಲ ವೇತನದ ಶೇಕಡ 10ರಷ್ಟು ಮಧ್ಯಂತರ ಪರಿಹಾರವನ್ನು ರಾಜ್ಯ ಸರ್ಕಾರಿ ನೌಕರರಿಗೆ, ಸ್ಥಳೀಯ ಸಂಸ್ಥೆಗಳ ಮತ್ತು ಅನುದಾನಿತ ಶಿಕ್ಷಣ ಸಂಸ್ಥೆಗಳ ನೌಕರರಿಗೆ ಹಾಗೂ ವಿಶ್ವವಿದ್ಯಾನಿಲಯಗಳ ಬೋಧಕೇತರ ಸಿಬ್ಬಂದಿಗೆ ದಿನಾಂಕ: 01.01.2006ರಿಂದ ಮಂಜೂರು ಮಾಡಲು ಶಿಫಾರಸ್ಸು ಮಾಡಿದೆ. ಪ್ರಾಥಮಿಕ ಶಾಲಾ ಶಿಕ್ಷಕರ ಸಂಘದ ಬೇಡಿಕೆಯನ್ನು ಪರಿಗಣಿಸುವುದನ್ನು ಬಾಕಿ ಇಟ್ಟು, ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಮಾಸಿಕ ರೂ.200/-ಗಳ ವಿಶೇಷ ಭತ್ಯೆಯನ್ನು ಮಂಜೂರು ಮಾಡುವುದಕ್ಕೂ ಸಹ ಆಯೋಗವು ಶಿಫಾರಸ್ಸು ಮಾಡಿರುತ್ತದೆ.

2. 5ನೇ ವೇತನ ಆಯೋಗದ ಮಧ್ಯಂತರ ವರದಿಯನ್ನು ಕೂಲಂಕಷವಾಗಿ ಪರಿಶೀಲಿಸಿ, ಸರ್ಕಾರವು ಈ ಶಿಫಾರಸ್ಸುಗಳನ್ನು ದಿನಾಂಕ: 01.04.2006ರಿಂದ ಜಾರಿಗೊಳಿಸುವ ಬದಲಾವಣೆಗಳೊಂದಿಗೆ ಆಯೋಗದ ಈ ಶಿಫಾರಸ್ಸುಗಳನ್ನು ಅಂಗೀಕರಿಸಿದೆ ಮತ್ತು ಅದರಂತೆ, ಈ ಕೆಳಗಿನಂತೆ ಆದೇಶಿಸಲಾಗಿದೆ.

3. ಸರ್ಕಾರವು, ಪೂರ್ಣಕಾಲಾವಧಿಯ ಕಾಲಿಕ ನಿಯತ ವೇತನ ಶ್ರೇಣಿಯಲ್ಲಿರುವ ರಾಜ್ಯ ಸರ್ಕಾರಿ ನೌಕರರಿಗೆ ಮಾಸಿಕ ಕನಿಷ್ಠ ರೂ.300/- ಮತ್ತು ಗರಿಷ್ಠ ರೂ.1500/-ಗಳ ಮಿತಿಗೊಳಪಟ್ಟು ಅವರ ಮೂಲಕ ವೇತನದ ಶೇಕಡ 10ರಷ್ಟು ತಾತ್ಕಾಲಿಕ ಪರಿಹಾರವನ್ನು ದಿನಾಂಕ: 01.04.2006 ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಹರ್ಷಿಸುತ್ತದೆ. ಸರ್ಕಾರವು ಅನುದಾನಿತ ಶಿಕ್ಷಣ ಸಂಸ್ಥೆಗಳ ಪ್ರಾಥಮಿಕ ಶಾಲಾ ಶಿಕ್ಷಕರು ಸೇರಿದಂತೆ ರಾಜ್ಯದ ಪ್ರಾಥಮಿಕ ಶಾಲಾ ಶಿಕ್ಷಕರಿಗೆ ಮಾಸಿಕ ರೂ.200/-ಗಳ ವಿಶೇಷ ಭತ್ಯೆಯನ್ನು ದಿನಾಂಕ: 01.04.2006ರಿಂದ ಜಾರಿಗೆ ಬರುವಂತೆ ಮಂಜೂರು ಮಾಡಲು ಸಹ ಹರ್ಷಿಸುತ್ತದೆ.

4. ಈ ಆದೇಶದ ಮೂಲಕ ಮಂಜೂರು ಮಾಡಿದ ತಾತ್ಕಾಲಿಕ ಪರಿಹಾರ/ ವಿಶೇಷ ಭತ್ಯೆ ಸೌಲಭ್ಯವು ಈ ಕೆಳಗಿನವರಿಗೂ ಅನ್ವಯವಾಗುವುದು:

(1) ವರ್ಕ್ ಚಾರ್ಜ್ ಸಿಬ್ಬಂದಿ ನೌಕರರು.

(2) ಸಾದಿಲ್ವಾರು ವೆಚ್ಚದಿಂದ ವೇತನ ಪಡೆಯುವ ಪೂರ್ಣಕಾಲಾವಧಿಯ ನೌಕರರು.

(3) ಅನುದಾನಿತ ಶೈಕ್ಷಣಿಕ ಸಂಸ್ಥೆಗಳ ಪೂರ್ಣಕಾಲಾವಧಿಯ ನೌಕರರು.

(4) ವಿಶ್ವವಿದ್ಯಾನಿಲಯಗಳ ಪೂರ್ಣಕಾಲಾವಧಿಯ ಬೋಧಕೇತರ ಸಿಬ್ಬಂದಿಗಳು.

(5) ಸ್ಥಳೀಯ ಸಂಸ್ಥೆಗಳ ಪೂರ್ಣಕಾಲಾವಧಿಯ ನೌಕರರು.

5. ಆದರೆ, ಈ ಆದೇಶಗಳು, ಯುಜಿಸಿ/ ಎಐಸಿಟಿಇ/ ಐಸಿಎಆರ್/ ಎಫ್‌ಎನ್‌ಜೆಪಿಸಿ ವೇತನ ಶ್ರೇಣಿಗಳನ್ನು ಹೊಂದಿರುವವರಿಗೆ ಹಾಗೂ ನಿವೃತ್ತಿಯ ತರುವಾಯ ಪುನರ್ ನೇಮಕಾತಿ ಹೊಂದಿರುವ ಅಥವಾ ಒಪ್ಪಂದದ ಆಧಾರದ ಮೇಲೆ ನೇಮಕಾತಿ ಹೊಂದಿರುವ ವ್ಯಕ್ತಿಗಳಿಗೆ ಅನ್ವಯವಾಗುವುದಿಲ್ಲ.

6. ಈ ಆದೇಶದ ಮೂಲಕ ಮಂಜೂರು ಮಾಡಿದ ತಾತ್ಕಾಲಿಕ ಪರಿಹಾರ/ ವಿಶೇಷ ಭತ್ಯೆ ಮೊತ್ತವನ್ನು ವಿಶಿಷ್ಟ ಸಂಭಾವನೆಯಾಗಿ ತೋರಿಸತಕ್ಕದ್ದು ಮತ್ತು 5ನೇ ವೇತನ ಆಯೋಗದ ಅಂತಿಮ ಶಿಫಾರಸ್ಸುಗಳ ಮೇರೆಗೆ ಮಾಡಲಾಗುವ ವೇತನ ಶ್ರೇಣಿಗಳ ಪರಿಷ್ಕರಣೆಯ ಪರಿಣಾಮವಾಗಿ ಪಡೆಯುವ ವೇತನದಲ್ಲಿನ ಹೆಚ್ಚಳದಲ್ಲಿ ಹೊಂದಾಣಿಕೆ ಮಾಡಲಾಗುವುದು.

7. ತಾತ್ಕಾಲಿಕ ಪರಿಹಾರ ಲೆಕ್ಕಹಾಕುವ ಉದ್ದೇಶಕ್ಕೆ **'ಮೂಲವೇತನ'** ಎಂದರೆ ಸರ್ಕಾರಿ ನೌಕರರು ಧಾರಣ ಮಾಡಿರುವ ಹುದ್ದೆಗೆ ಅನ್ವಯವಾಗುವ ವೇತನ ಶ್ರೇಣಿಯಲ್ಲಿ ಪಡೆಯುವ ಅಥವಾ ಕರ್ನಾಟಕ ಸಿವಿಲ್ ಸೇವಾ (ಕಾಲಬದ್ಧ ಮುಂಬಡ್ತಿ) ನಿಯಮಗಳು, 1983ರಡಿ ಮಂಜೂರಾಗುವ ಆಯ್ಕೆಕಾಲಿಕ ವೇತನ ಮತ್ತು ಕರ್ನಾಟಕ ಸಿವಿಲ್ ಸೇವಾ (ಹಿರಿಯ ವೇತನ ಶ್ರೇಣಿಗೆ ಸ್ವಯಂಚಾಲಿತ ವಿಶೇಷ ಮುಂಬಡ್ತಿ) ನಿಯಮಗಳು, 1991ರಡಿ ಹಿರಿಯ ವೇತನ ಶ್ರೇಣಿ ಮತ್ತು ಅದರಲ್ಲಿ ಈ ಮುಂದಿನವುಗಳನ್ನು ಒಳಗೊಳ್ಳುತ್ತದೆ:

ಅ. ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಾಗಿ ಅವರಿಗೆ ಸ್ಥಗಿತ ಬಡ್ತಿಯನ್ನು ನೀಡಲಾಗಿದ್ದರೆ ಆ ಸ್ಥಗಿತ ವೇತನ ಬಡ್ತಿ.

ಆ. 1974ರ ಕರ್ನಾಟಕ ಸರ್ಕಾರಿ ಸೇವಾ (ಸೇವೆ ಮತ್ತು ಕನ್ನಡ ಭಾಷಾ ಪರೀಕ್ಷೆಗಳು) ನಿಯಮಗಳ 6ನೇ ನಿಯಮದ ಉಪಬಂಧಗಳಿಗೆ ಅನುಸಾರವಾಗಿ ವೇತನ ಶ್ರೇಣಿಯ ಗರಿಷ್ಠಕ್ಕಿಂತ ಹೆಚ್ಚಿಗೆಯಾಗಿ ನೀಡಲಾದ ಅಡಿಷನಲ್ ವೇತನ ಬಡ್ತಿ ಯಾವುದಾದರೂ ಇದ್ದರೆ ಆ ಅಡಿಷನಲ್ ವೇತನ ಬಡ್ತಿ.

ಇ. 1994ರ ಕರ್ನಾಟಕ ಸರ್ಕಾರಿ ಸೇವಾ (ಪರಿಷ್ಕೃತ ವೇತನ) ನಿಯಮಗಳ ನಿಯಮ 7ರ ಉಪನಿಯಮ (3)ರ ಮೇರೆಗೆ ನೀಡಲಾಗುವ ಯಾವುದೇ ವೈಯಕ್ತಿಕ ವೇತನ.

8. ಮೇಲಿನ ಕಂಡಿಕೆ 5ರಲ್ಲಿ ನಿರೂಪಿಸಿರುವುದನ್ನು ಹೊರತುಪಡಿಸಿ ಇತರೆ ಯಾವುದೇ ಉಪಲಬ್ಧಗಳು ಮೂಲವೇತನಕ್ಕೆ ಸೇರತಕ್ಕದ್ದಲ್ಲ.

9. ಸ್ಥಾನಿಕ ಸಂಸ್ಥೆಗಳ (ಮುನಿಸಿಪಾಲಿಟಿಗಳು, ಮುನಿಸಿಪಲ್ ಕಾರ್ಪೋರೇಶನ್‌ಗಳ) ನೌಕರರಿಗೆ ಈ ಸೌಲಭ್ಯವನ್ನು ಮಂಜೂರು ಮಾಡುವುದರಿಂದಾಗಿ ಉಂಟಾಗುವ ವೆಚ್ಚವನ್ನು ಆಯಾ ಸ್ಥಾನಿಕ ಸಂಸ್ಥೆಗಳೇ ಭರಿಸತಕ್ಕದ್ದು.

10. ತಾತ್ಕಾಲಿಕ ಪರಿಹಾರದ ಕಾರಣದಿಂದ ಸಂದಾಯ ಮಾಡಲು ಐವತ್ತು ಪೈಸೆ ಹಾಗೂ ಅದಕ್ಕಿಂತ ಹೆಚ್ಚಿನ ಭಿನ್ನಾಂಶಗಳನ್ನು ಮುಂದಿನ ರೂಪಾಯಿಗೆ ಪೂರ್ಣಾಂಕಗೊಳಿಸತಕ್ಕದ್ದು ಮತ್ತು ಐವತ್ತು ಪೈಸೆಗಿಂತ ಕಡಿಮೆ ಇರುವ ಭಿನ್ನಾಂಕಗಳನ್ನು ಕಡೆಗಣಿಸತಕ್ಕದ್ದು.

11. ಈ ಆದೇಶದ ಮೂಲಕ ಮಂಜೂರಾದ ತಾತ್ಕಾಲಿಕ ಪರಿಹಾರದ ಮೊತ್ತವು ವಿಶಿಷ್ಟ ಸಂಭಾವನೆಯಾಗಿದ್ದು, ಇದು ನಿವೃತ್ತಿ ಸೌಲಭ್ಯಗಳನ್ನು ನಿರ್ಧರಿಸುವಾಗ ಅಥವಾ ಬೇರೆ ಯಾವುದೇ ಉದ್ದೇಶಗಳಿಗೆ ಪರಿಗಣಿಸತಕ್ಕದ್ದಲ್ಲ.

12. ಈ ತಾತ್ಕಾಲಿಕ ಪರಿಹಾರದ ವೆಚ್ಚವನ್ನು ವೇತನ ವೆಚ್ಚವನ್ನು ಭರಿಸುವ ಲೆಕ್ಕ ಶೀರ್ಷಿಕೆಯಿಂದಲೇ ಭರಿಸತಕ್ಕದ್ದು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎನ್.ಟಿ. ನಾಯ್ಕ್**

ಸರ್ಕಾರದ ಉಪ ಕಾರ್ಯದರ್ಶಿ,

ಆರ್ಥಿಕ ಇಲಾಖೆ (ಸೇವೆಗಳು-2).

## FINANCE SECRETARIAT

**Subject:** Grant of Interim Relief.

**Government Order No. FD 8 SRP 2006, Bangalore, Dated: 29th March, 2006**

Government have constituted Fifth State Pay Commission to go into the revision of pay scales of State Government employees, employees of aided educational institutions/ local bodies and non-teaching staff of Universities and to evolve a new pay structure etc. Pending presentation of its final report, the 5th State Pay Commission has recommended for grant of Interim Relief to State Government employees including employees of local bodies and aided educational institutions and non-teaching staff of the Universities at the rate of 10% of basic pay subject to a minimum of Rs.300/- per month and maximum of Rs.1500/- per month with effect from 1st January 2006. Pending consideration of the demands of the Primary School Teacher's Association, the Commission has also recommended for grant of Special Allowance of Rs.200/- per month to the Primary School Teachers.

2. After careful examination of the Interim Report of the 5th State Pay Commission, Government have accepted its recommendations with modification that these recommendations be implemented with effect from 01.04.2006 and accordingly, the following orders are issued.

3. Government are pleased to sanction Interim Relief at the rate of 10% of basic pay subject to a minimum of Rs.300/- per month and maximum of Rs.1500/- per month to full time State Government employees who are on regular time scale of pay with effect from 1st April 2006. Government are also pleased to sanction Special Allowance of Rs.200/- per month to the Primary School Teahcers including Primary School Teachers of aided educational institutions with effect from 1st April 2006.

4. The benefit of the Interim Relief/ Special Allowance sanctioned by this Order shall also apply to the following categories of employees who are on regular time scale of pay:

(i) Staff borne on the Work-charged Establishments.

(ii) Whole-time employees paid from contingencies.

(iii) Full time employees of aided educational institutions.

(iv) Full time non-teaching staff of the Universities.

(v) Full time employees of the Local Bodies.

5. These orders will, however, not apply to the persons who are on UGC/ AICTE/ ICAR/ FNJPC scales of pay and also to those who have been re-employed after retirement or who have been appointed on contract basis.

6. The amount of Interim Relief/ Special Allowance sanctioned by this Order shall be shown as a district element of remuneration and shall be adjusted against the increase in pay to be recommended by the Pay Commission in its final Report.

7. For the purpose of calculation of Interim Relief, the term **"Basic Pay"** means pay drawn by the Government servant in the scale of pay applicable to the post held by him or in the selection time scale of pay granted under the Karnataka Civil Services (Time Bound Advancement) Rules, 1983 or in the senior scale of pay granted under the Karnataka Civil Services (Automatic Grant of Special Promotion to Senior Scale of Pay) Rules, 1991 and includes-

(a) stagnation increment, if any, granted to him above the maximum of the scale of pay;

(b) additional increment, if any, granted to him above the maximum of the scale of pay, in accordance with the provisions of Rule 6 of the Karnataka Civil Services (Service and Kannada Language Examination) Rules, 1974;

(c) personal pay, if any, granted to him under sub-rule (3) of Rule 7 of the Karnataka Civil Services (Revised Pay) Rules, 1999.

8. Basic Pay shall not include any emoluments other than those specified in para 7 above.

9. In respect of the employees of local bodies (Municipalities/ Muncipal Corporations), the expenditure that shall be incurred on account of extension of the benefit sanctioned by this order shall be borne by the concerned local bodies.

10. The payment on account of Interim Relief involving fractions of fifty paise and above shall be rounded off to the next rupee and fractions of less than fifty paise shall be ignored.

11. The amount of Interim Relief sanctioned in this Order will be sui generis and shall not count as emoluments for purpose of pensionary benefits or any other purpose.

12. The expenditure on Interim Relief will be booked under the same head of account from which the pay is being drawn.

By Order and in the Name of the Governor of Karnataka,

**N.T. NAIK**

Deputy Secretary to Government,
Finance Department (Services-2).

PR-468

## ಕನ್ನಡ ಮತ್ತು ಸಂಸ್ಕೃತಿ ಸಚಿವಾಲಯ

**ವಿಷಯ :** ಸ್ವಾತಂತ್ರ್ಯ ಹೋರಾಟಗಾರ್ತಿ ರಾಣಿ ಅಬ್ಬಕ್ಕದೇವಿ ಪ್ರತಿಮೆಯನ್ನು ಸ್ಥಾಪಿಸಲು ಆಧಾರ ಪೀಠವನ್ನು ನಿರ್ಮಾಣದ ಪರಿಷ್ಕೃತ ಅಂದಾಜು ಪಟ್ಟಿಗೆ ಮಂಜೂರಾತಿ ನೀಡುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಸಂಕಇ 15 ಸ್ಮಾಪ್ರನಿ 99 ದಿನಾಂಕ: 17.01.2000.

(2) ಸರ್ಕಾರದ ಆದೇಶ ಸಂಖ್ಯೆ: ಸಂಕಇ 15 ಸ್ಮಾಪ್ರನಿ 99 ದಿನಾಂಕ: 25.03.2003.

(3) ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ: ಕಸನಿ 129 ಪ್ರತಿಮೆ 99-2000 ದಿನಾಂಕ: 03.09.2005 ಹಾಗೂ 15.10.2005.

**ಪ್ರಸ್ತಾವನೆ:**

ಮೇಲೆ 1ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ರಾಣಿ ಅಬ್ಬಕ್ಕದೇವಿಯ ಕಂಚಿನ ಪ್ರತಿಮೆ ನಿರ್ಮಾಣ ಕಾರ್ಯಕ್ಕಾಗಿ ರೂ.10.00 ಲಕ್ಷಗಳನ್ನು ಹಾಗೂ ಸಾಗಾಣಿಕೆ ವೆಚ್ಚ, ಆಕಸ್ಮಿಕ ವೆಚ್ಚ ಮುಂತಾದವುಗಳಿಗೆ ರೂ.50,000-00 ಗಳನ್ನು ಕರ್ನಾಟಕ ಶಿಲ್ಪಕಲಾ ಅಕಾಡೆಮಿಯ ರಿಜಿಸ್ಟ್ರಾರ್, ಬೆಂಗಳೂರು ರವರಿಗೆ ಬಿಡುಗಡೆ ಮಾಡಲಾಗಿತ್ತು. ಮೇಲೆ 2ರಲ್ಲಿ ಓದಲಾಗಿರುವ ಸರ್ಕಾರಿ ಆದೇಶದಲ್ಲಿ ರಾಣಿ ಅಬ್ಬಕ್ಕದೇವಿ ಕಂಚಿನ ಪ್ರತಿಮೆಯನ್ನು ಮಹಾನಗರ ಪಾಲಿಕೆಯ ಶ್ರೀ ಮಾಧವರಾವ್ ವೃತ್ತದಲ್ಲಿ ಸ್ಥಾಪಿಸಲು ಅನುಕೂಲವಾಗುವಂತೆ ಆಧಾರಪೀಠ ಸ್ಥಾಪಿಸಲು ರೂ.4.00 ಲಕ್ಷಗಳನ್ನು ಕಾರ್ಯಪಾಲಕ ಇಂಜಿನಿಯರ್, ನಂ.2 ಕಟ್ಟಡಗಳ ವಿಭಾಗ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಿದೆ. ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದ ನಿರ್ದೇಶಕರು ಮೇಲೆ 3ರಲ್ಲಿ ಓದಲಾಗಿರುವ ಪತ್ರಗಳಲ್ಲಿ ಅನಿವಾರ್ಯ ಕಾರಣಗಳಿಂದ, ರಾಣಿ ಅಬ್ಬಕ್ಕದೇವಿ ಕಂಚಿನ ಪ್ರತಿಮೆಯನ್ನು ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂಖ್ಯೆ-10, ದ.ರಾ.ಬೇಂದ್ರೆ ರಸ್ತೆ ಮತ್ತು ತುಮಕೂರು ರಸ್ತೆ ಸಂಧಿಸುವ ಕರ್ನಾಟಕ ಸೋಪ್ ಫ್ಯಾಕ್ಟರಿ ಮುಂಭಾಗದಲ್ಲಿರುವ ಜಯಚಾಮರಾಜ ಒಡೆಯರ್ ವೃತ್ತದಲ್ಲಿ ಸ್ಥಾಪಿಸಲು ದಿನಾಂಕ: 06.06.2005ರ ಪತ್ರದಲ್ಲಿ ಬೆಂಗಳೂರು ಮಹಾನಗರ ಪಾಲಿಕೆಯು ಅನುಮತಿ ನೀಡಿರುವುದಾಗಿ ತಿಳಿಸಿರುತ್ತಾರೆ. ಅದರಂತೆ ಕಾರ್ಯಪಾಲಕ ಅಭಿಯಂತರರು ನಂ.1 ಕಟ್ಟಡಗಳ ವಿಭಾಗ ಬೆಂಗಳೂರು ಇವರಿಗೆ ಸದರಿ ಸ್ಥಳದಲ್ಲಿ ಆಧಾರಪೀಠ ಸಿದ್ಧಪಡಿಸಲು ತಿಳಿಸಲಾಗಿತ್ತು. ಆದರೆ ಇವರು 2005-06ನೇ ಸಾಲಿನ ಲೋಕೋಪಯೋಗಿ ಇಲಾಖೆ ಬೆಂಗಳೂರು ವೃತ್ತದ ಎಸ್.ಆರ್. ದರಗಳಂತೆ ಆಧಾರಪೀಠದ ಅಂದಾಜು ಪಟ್ಟಿ ಸಿದ್ಧಪಡಿಸಿ ರೂ.4,75,000-00 ಗಳ ಮೊತ್ತಕ್ಕೆ ಕಳುಹಿಸಿ ಹೆಚ್ಚುವರಿ ಅಂದಾಜು ವೆಚ್ಚ ರೂ.75,000-00 ಗಳನ್ನು ಬಿಡುಗಡೆ ಮಾಡಬೇಕೆಂದು ಕೋರಿರುತ್ತಾರೆಂದು ನಿರ್ದೇಶಕರು ತಮ್ಮ ಪತ್ರದಲ್ಲಿ ತಿಳಿಸಿರುತ್ತಾರೆ. ಈ ಕೆಲಸವು ಅತ್ಯಂತ ತುರ್ತಾಗಿರುವ ಕಾರಣ ರೂ.75,000-00 ಗಳನ್ನು ಕಾರ್ಯಪಾಲಕ ಇಂಜಿನಿಯರ್ ನಂ.1 ಕಟ್ಟಡಗಳ ವಿಭಾಗ, ಬೆಂಗಳೂರು ಇವರಿಗೆ ಬಿಡುಗಡೆ ಮಾಡಿ ಆದೇಶ ಹೊರಡಿಸಬೇಕೆಂದು ನಿರ್ದೇಶಕರು ಕೋರಿರುತ್ತಾರೆ.

ನಿರ್ದೇಶಕರವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 5 ಸ್ಮಾಪ್ರನಿ 2006, ಬೆಂಗಳೂರು, ದಿನಾಂಕ: 20ನೇ ಮಾರ್ಚ್, 2006**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಸ್ವಾತಂತ್ರ್ಯ ಹೋರಾಟಗಾರ್ತಿ ರಾಣಿ ಅಬ್ಬಕ್ಕದೇವಿ ಕಂಚಿನ ಪ್ರತಿಮೆಯನ್ನು ಬೆಂಗಳೂರು ಮಹಾನಗರ ಪಾಲಿಕೆ ವಾರ್ಡ್ ಸಂಖ್ಯೆ 10, ದ.ರಾ. ಬೇಂದ್ರೆ ರಸ್ತೆ ಮತ್ತು ತುಮಕೂರು ರಸ್ತೆ ಸಂಧಿಸುವ ಕರ್ನಾಟಕ ಸೋಪ್ ಫ್ಯಾಕ್ಟರಿ ಮುಂಭಾಗದಲ್ಲಿರುವ ಜಯಚಾಮರಾಜ ಒಡೆಯರ್ ವೃತ್ತದಲ್ಲಿ ಸ್ಥಾಪಿಸುವ ಸಲುವಾಗಿ ಆಧಾರಪೀಠ ನಿರ್ಮಾಣಕ್ಕೆ 2005-06ನೇ ಸಾಲಿನ ಲೋಕೋಪಯೋಗಿ ಇಲಾಖೆ ಬೆಂಗಳೂರು ವೃತ್ತದ ಎಸ್.ಆರ್. ದರಗಳಂತೆ ಹೆಚ್ಚುವರಿ ವೆಚ್ಚ ರೂ.75,000-00 (ರೂ. ಎಪ್ಪತ್ತೈದು ಸಾವಿರ ಮಾತ್ರ) ಗಳನ್ನು ಕಾರ್ಯಪಾಲಕ ಅಭಿಯಂತರರು, ನಂ.1 ಕಟ್ಟಡಗಳ ವಿಭಾಗ ಬೆಂಗಳೂರು, ಇವರಿಗೆ ಬಿಡುಗಡೆ ಮಾಡಲು ಮಂಜೂರಾತಿ ನೀಡಿದೆ.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 4202-04-800-1-02-139 (ಯೋಜನೇತರ) ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರಿಕ ಆರ್ಥಿಕ ಸಲಹೆಗಾರರ ಟಿಪ್ಪಣಿ ಸಂಖ್ಯೆ: ಶಿಇ 187 ಐಎಫ್(ಬಿಎ) 2006 ದಿನಾಂಕ: 14.03.2006ರಲ್ಲಿ ನೀಡಿರುವ ಸಹಮತಿ ಮೇರೆಗೆ ಮತ್ತು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.07.96ರಲ್ಲಿ ಸರ್ಕಾರದ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್.441

ಪೀಠಾಧಿಕಾರಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ).

**ವಿಷಯ :** ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯದ ಉಪಯೋಗಕ್ಕೆ ಬೇಕಾಗುವ ಕಡತದ ಕವಚ (ಫ್ಲಾಪ್ ಬೋರ್ಡ್) ಗಳನ್ನು ಖರೀದಿಸುವ ಕುರಿತು.

**ಓದಲಾಗಿದೆ:** (1) ನಿರ್ದೇಶಕರು, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು, ಇವರ ಪತ್ರ ಸಂಖ್ಯೆ: ಎ.ಆರ್.ಎಸ್. 14 ಎ.ಡಿ.ಎಂ. 2005, ದಿನಾಂಕ: 17.09.2005, 19.10.2005 ಮತ್ತು 08.03.2006.

**ಪ್ರಸ್ತಾವನೆ:**

ಮೇಲೆ ಓದಲಾದ ಪತ್ರಗಳಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶಕರು, ಐತಿಹಾಸಿಕ ದಾಖಲೆಗಳು, ಖಾಸಗಿ ದಾಖಲೆಗಳು, ಕರ್ನಾಟಕ ಸರ್ಕಾರದ ಸಚಿವಾಲಯದ 'ಬಿ' ಮತ್ತು 'ಸಿ' ವರ್ಗದ ಕಡತಗಳು ಶಿಥಿಲಗೊಂಡ ದಾಖಲೆಗಳು, ಹಳೆಯದಾದ ಪುಸ್ತಕಗಳು ಇತ್ಯಾದಿಗಳನ್ನು ಸಂರಕ್ಷಿಸಲು 20 ಸಾವಿರ ಫ್ಲಾಪ್ ಬೋರ್ಡ್‌ಗಳು ಅಗತ್ಯವಾಗಿ ಬೇಕಾಗಿದೆ ಎಂದು ತಿಳಿಸಿ ಇದಕ್ಕೆ ರೂ.4.00 ಲಕ್ಷ ಮಂಜೂರಾತಿ ನೀಡುವಂತೆ ಕೋರಿರುತ್ತಾರೆ. 2005-06ನೇ ಸಾಲಿನ ಕ್ರಿಯಾ ಯೋಜನೆಯಲ್ಲಿ ಈ ಕಾರ್ಯಕ್ರಮವನ್ನು ಸೇರ್ಪಡೆಗೊಳಿಸಲಾಗಿದೆ. ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-104-0-01-051 (ಯೋಜನೇತರ) ರಡಿಯಲ್ಲಿ ಭರಿಸಬಹುದೆಂದು ನಿರ್ದೇಶಕರು ತಿಳಿಸಿರುತ್ತಾರೆ. ಮತ್ತು ಅದಕ್ಕೆ ಸಂಬಂಧಪಟ್ಟಂತೆ ತಡೆಪಟ್ಟಿಯನ್ನು ಸಹ ಒದಗಿಸಿರುತ್ತಾರೆ. ಫ್ಲಾಪ್‌ಬೋರ್ಡ್‌ಗಳ ಖರೀದಿಯನ್ನು ಕರ್ನಾಟಕ ಪಾರದರ್ಶಕತೆ ನಿಯಮದಡಿ ಮಾಡಲಾಗುವುದೆಂದು ನಿರ್ದೇಶಕರು ಸ್ಪಷ್ಟಪಡಿಸಿರುತ್ತಾರೆ. ನಿರ್ದೇಶಕರವರ ಪ್ರಸ್ತಾವನೆಯನ್ನು ಕೂಲಂಕಷವಾಗಿ ಪರಿಶೀಲಿಸಲಾಯಿತು.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 32 ರಾಪಸ 2005, ಬೆಂಗಳೂರು, ದಿನಾಂಕ: 14ನೇ ಮಾರ್ಚ್, 2006**

ಮೇಲೆ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ನಿರ್ದೇಶನಾಲಯಕ್ಕೆ ಪ್ರಸ್ತಾವನೆಯಲ್ಲಿ ವಿವರಿಸಿರುವ ಉದ್ದೇಶಕ್ಕಾಗಿ 20 ಸಾವಿರ ಫ್ಲಾಪ್ ಬೋರ್ಡ್‌ಗಳನ್ನು ರೂ.4.00 ಲಕ್ಷ (ರೂ. ನಾಲ್ಕು ಲಕ್ಷ ಮಾತ್ರ) ವೆಚ್ಚದಲ್ಲಿ ಕರ್ನಾಟಕ ಸಾರ್ವಜನಿಕ ಸಂಗ್ರಹಣೆಯಲ್ಲಿ ಪಾರದರ್ಶಿಕತೆ ಕಾಯ್ದೆಯನ್ವಯ ನಿಯಮಗಳನ್ನು ಅನುಸರಿಸಿ ಖರೀದಿ ಮಾಡಲು ಸರ್ಕಾರದ ಮಂಜೂರಾತಿಯನ್ನು ಈ ಮೂಲಕ ನೀಡಿದೆ. ಈ ವೆಚ್ಚವನ್ನು 2005-06ನೇ ಸಾಲಿನ ಆಯವ್ಯಯ ಲೆಕ್ಕಶೀರ್ಷಿಕೆ 2205-00-104-0-01-051 (ಯೋಜನೇತರ) ರಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಆಂತರೀಕ ಆರ್ಥಿಕ ಸಲಹೆಗಾರರು ಟಿಪ್ಪಣಿ ಸಂಖ್ಯೆ: ಶಿಇ 859 ಐಎಫ್(ಬಿಎ) 2005, ದಿನಾಂಕ: 14.11.2005 ರಂದು ನೀಡಿದ ಸಹಮತಿಯನ್ವಯ ಹಾಗೂ ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 1 ಟಿ.ಎಫ್.ಪಿ. 96 ದಿನಾಂಕ: 10.07.1996ರಲ್ಲಿ ಆರ್ಥಿಕ ಇಲಾಖೆಯ ಆದೇಶದಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪಿ.ಆರ್.442

ಪೀಠಾಧಿಕಾರಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ).

**ವಿಷಯ :** ಪತ್ರಾಗಾರ ಅಭಿವೃದ್ಧಿಗಾಗಿ 2001-02ನೇ ಸಾಲಿನ ಕೇಂದ್ರದ ಸಹಾಯದ ಸಹಾಯಾನುದಾನ ಯೋಜನೆಯಡಿ ಮೈಸೂರು ವಿಭಾಗೀಯ ಪತ್ರಾಗಾರ ಕಛೇರಿಯ ಕಟ್ಟಡ ನಿರ್ಮಿಸಲು ಸಹಾಯನುದಾನ ಮೂರನೇ ಕಂತು ರೂ.4.00 ಲಕ್ಷಗಳು ಬಿಡುಗಡೆ ಕುರಿತು.

**ಓದಲಾಗಿದೆ:** (1) ಕರ್ನಾಟಕ ರಾಜ್ಯಪತ್ರಾಗಾರ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ: ಎ.ಆರ್.ಎಸ್. 35 ಎನ್.ಎ.ಐ 2001 (ಭಾಗ-2) ದಿನಾಂಕ: 19.12.2005.

(2) ಸರ್ಕಾರದ ಆದೇಶ ಸಂಖ್ಯೆ: ಎಫ್‌ಡಿ 69 ಬಿಆರ್‌ಎಸ್ 2006, ಬೆಂಗಳೂರು, ದಿನಾಂಕ: 16.02.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ 1ರಲ್ಲಿನ ದಿನಾಂಕ: 19.12.2005ರ ಕರ್ನಾಟಕ ರಾಜ್ಯಪತ್ರಾಗಾರ ನಿರ್ದೇಶನಾಲಯ ನಿರ್ದೇಶಕರ ಪತ್ರದಲ್ಲಿ ಇದೇ ಕಾಮಗಾರಿಗೆ ರಾಷ್ಟ್ರೀಯ ಪತ್ರಾಗಾರ ನವದೆಹಲಿ, ಇವರು ಪತ್ರಾಗಾರ ಅಭಿವೃದ್ಧಿಗಾಗಿ 2001-02ನೇ ಸಾಲಿನ ಕೇಂದ್ರದ ಸಹಾಯದ ಸಹಾಯಾನುದಾನ ಯೋಜನೆಯಡಿಯಲ್ಲಿ ಮೈಸೂರು ವಿಭಾಗೀಯ ಪತ್ರಾಗಾರ ಕಟ್ಟಡ ನಿರ್ಮಿಸಲು ಮೂರನೇ ಕಂತು ರೂ.4.00 ಲಕ್ಷಗಳನ್ನು ಬಿಡುಗಡೆ ಮಾಡಿರುವ ಮೊತ್ತವನ್ನು ಲೆಕ್ಕ ಶೀರ್ಷಿಕೆ 2205-00-104-0-01 ರಾಜ್ಯ ಪತ್ರಾಗಾರ ಘಟಕ-059 ಇತರೆ ವೆಚ್ಚಗಳು (ಯೋಜನೆ) ಅಡಿಯಲ್ಲಿ ಭರಿಸಲು ಮಂಜೂರು ಮಾಡಲಾಗಿರುತ್ತದೆ. ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆಯ 2005-06ನೇ ಸಾಲಿನ ಮುಂದುವರೆದ ಯೋಜನಾ ಕಾರ್ಯಕ್ರಮಗಳ ವೆಚ್ಚ ಭರಿಸಲು, ಲೆಕ್ಕ ಶೀರ್ಷಿಕೆ 2205-00-104-01 ರಾಜ್ಯ ಪತ್ರಾಗಾರ ಘಟಕ-059 ಇತರೆ ವೆಚ್ಚಗಳು (ಯೋಜನೆ) ಅಡಿಯಲ್ಲಿ ರೂ.6.98 ಲಕ್ಷಗಳು ಅನುದಾನ ಒದಗಿಸಿದ್ದು, ಈ ಅನುದಾನದ ಮೊತ್ತವನ್ನು ಇಲಾಖೆಯ ವಿವಿಧ ಕಾರ್ಯಕ್ರಮಗಳಿಗೆ ವೆಚ್ಚ ಮಾಡಲಾಗುತ್ತದೆ.

ಈಗ ಕೇಂದ್ರ ಸರ್ಕಾರದಿಂದ ಬಿಡುಗಡೆ ಮಾಡಿರುವ ರೂ.4.00 ಲಕ್ಷಗಳನ್ನು ಈ ಮೇಲಿನ ಲೆಕ್ಕ ಶೀರ್ಷಿಕೆ ಅಡಿಯಲ್ಲಿ, ಭರಿಸಲು, ಉಲ್ಲೇಖಿತ ಸರ್ಕಾರಿ ಆದೇಶದನ್ವಯ, ಖಜಾನೆ ಇಲಾಖೆಯ ಖಜಾನೆ ಗಣಕ ಜಾಲಾ ನಿರ್ವಹಣಾ ಕೇಂದ್ರ, ಖನಿಜ ಭವನ, ಇಲ್ಲಿ ಸಂಬಂಧಿಸಿದ ಲೆಕ್ಕ ಶೀರ್ಷಿಕೆಗೆ ಸೇರಿಸಿಕೊಂಡು ಖಜಾನೆಯಿಂದ ಹಣ ಡ್ರಾ ಮಾಡಲು ಅನುಕೂಲವಾಗಲು, ಮಾಹಿತಿಯನ್ನು ಫ್ಲಾಪಿಯಲ್ಲಿ ಖಜಾನೆ ಗಣಕ ಜಾಲಾ ನಿರ್ವಹಣಾ ಕೇಂದ್ರಕ್ಕೆ ಕಳುಹಿಸಿಕೊಡಲಾಗಿತ್ತು. ಆದರೆ, ಖಜಾನಾಧಿಕಾರಿಗಳು ಕೇಂದ್ರದ ಅನುದಾನದ ಮೊತ್ತ ರೂ.4.00 ಲಕ್ಷಗಳನ್ನು ಲೆಕ್ಕ ಶೀರ್ಷಿಕೆ: 2205-00-104-0-01-059 ಇತರೆ ವೆಚ್ಚಗಳು (ಯೋಜನೆ) ಇದರ ಅಡಿಯಲ್ಲಿ ಸೇರಿಸಲು ಈ ಅನುದಾನದ ಮೊತ್ತವು ಹೆಚ್ಚುವರಿ ಅನುದಾನ ಎಂದು (ಅಡಿಷಾನಾಲಿಟಿ) ಆರ್ಥಿಕ ಇಲಾಖೆಯಿಂದ, ಅನುಮತಿ ಆದೇಶದ ಅವಶ್ಯಕತೆ ಇರುತ್ತದೆ ಎಂದು ತಿಳಿಸಿರುತ್ತಾರೆ.

ಮೈಸೂರು ವಿಭಾಗೀಯ ಪತ್ರಾಗಾರ ಕಛೇರಿಯ ಕಟ್ಟಡದ ನಿರ್ಮಾಣದ ಕಾಮಗಾರಿಗೆ, ಈ ಅನುದಾನದ ಮೊತ್ತ ರೂ.4.00 ಲಕ್ಷಗಳನ್ನು ಎಕ್ಸಿಕ್ಯೂಟೀವ್ ಇಂಜಿನಿಯರ್, ಕಟ್ಟಡಗಳ ವಿಭಾಗ, ಲೋಕೋಪಯೋಗಿ ಇಲಾಖೆ, ಮೈಸೂರು ಇವರಿಗೆ ತುರ್ತಾಗಿ ಬಿಡುಗಡೆ ಮಾಡಬೇಕಾಗಿರುತ್ತದೆ.

ಆದ್ದರಿಂದ ಈ ಅನುದಾನದ ಮೊತ್ತ ರೂ.4.00 ಲಕ್ಷಗಳು ಹೆಚ್ಚುವರಿ ಅನುದಾನವೆಂದು ಆರ್ಥಿಕ ಇಲಾಖೆಯಿಂದ ಆದೇಶ ಹೊರಡಿಸಿಕೊಡಲು ಪತ್ರಾಗಾರ ಇಲಾಖಾ ನಿರ್ದೇಶಕರು ಕೋರಿರುತ್ತಾರೆ.

ಮೇಲೆ ಓದಲಾದ ಕ್ರಮಾಂಕ 2ರಲ್ಲಿನ ಸರ್ಕಾರದ ಆದೇಶದಲ್ಲಿ ರಾಜ್ಯ ಪತ್ರಾಗಾರ ಇಲಾಖೆಗೆ ಲೆಕ್ಕಶೀರ್ಷಿಕೆ 2205-00-104-01-059 (ಯೋಜನೆ) ಅಡಿಯಲ್ಲಿ ರೂ.4 ಲಕ್ಷಗಳನ್ನು ಮೈಸೂರಿನ ವಿಭಾಗೀಯ ಪತ್ರಾಗಾರ ಕಟ್ಟಡಕ್ಕೆ ಹೆಚ್ಚುವರಿ ಅನುದಾನವಾಗಿ ಮಂಜೂರು ಮಾಡಲಾಗಿದೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 33 ರಾಪಸ 2005, ಬೆಂಗಳೂರು, ದಿನಾಂಕ: 18ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಕರ್ನಾಟಕ ರಾಜ್ಯ ಪತ್ರಾಗಾರ ಅಭಿವೃದ್ಧಿಗಾಗಿ 2001-2002ನೇ ಸಾಲಿನ ಕೇಂದ್ರದ ಸಹಾಯ ಅನುದಾನ ಯೋಜನೆಯಡಿ ಮೈಸೂರು ವಿಭಾಗೀಯ ಪತ್ರಾಗಾರ ಕಛೇರಿಯ ಕಟ್ಟಡದ ನಿರ್ಮಾಣಕ್ಕೆ ರೂ.4.00 ಲಕ್ಷಗಳನ್ನು (ನಾಲ್ಕು ಲಕ್ಷ ರೂಪಾಯಿಗಳು ಮಾತ್ರ) ಎಕ್ಸಿಕ್ಯೂಟೀವ್ ಇಂಜಿನಿಯರ್, ಕಟ್ಟಡಗಳ ವಿಭಾಗ, ಲೋಕೋಪಯೋಗಿ ಇಲಾಖೆ, ಮೈಸೂರು, ಇವರಿಗೆ ಪಾವತಿಸಲು ಲೆಕ್ಕ ಶೀರ್ಷಿಕೆ 2205-00-104-0-01-059 ಇತರೆ ವೆಚ್ಚಗಳು (ಯೋಜನೆ) ಅಡಿಯಲ್ಲಿ ರೂ.4.00 ಲಕ್ಷಗಳ (ನಾಲ್ಕು ಲಕ್ಷ ರೂಪಾಯಿಗಳು ಮಾತ್ರ) ಹೆಚ್ಚುವರಿ ಅನುದಾನವನ್ನು ನಿರ್ದೇಶಕರು, ರಾಜ್ಯಪತ್ರಾಗಾರ ನಿರ್ದೇಶನಾಲಯ, ಬೆಂಗಳೂರು ಇವರಿಗೆ ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ಬಿಡುಗಡೆ ಮಾಡಲಾಗಿದೆ.

1) ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಬಳಸತಕ್ಕದ್ದು.

2) ಮಂಜೂರು ಮಾಡಿದ ಹಣವನ್ನು ಬಳಕೆ ಮಾಡಿದ ಬಗ್ಗೆ ಲೆಕ್ಕ ಪರಿಶೋಧಕರಿಂದ ದೃಢೀಕರಿಸಿ ಹಣ ಬಳಕೆ ಪ್ರಮಾಣ ಪತ್ರವನ್ನು ಒದಗಿಸುವುದು.

3) ಕಟ್ಟಡ ಕಾಮಗಾರಿ ಪ್ರಗತಿ ಬಗ್ಗೆ ವರದಿ ಹಾಗೂ ದಾಖಲಾತಿಗಳನ್ನು ಸಲ್ಲಿಸುವುದು.

4) ಕಟ್ಟಡ ಪೂರ್ಣಗೊಂಡ ನಂತರ ಮೌಲ್ಯಮಾಪನ ಪ್ರಮಾಣ ಪತ್ರ ಸಲ್ಲಿಸುವುದು.

ಈ ಆದೇಶವನ್ನು ಆರ್ಥಿಕ ಇಲಾಖೆಯು ಟಿಪ್ಪಣಿ ಸಂಖ್ಯೆ: ಆಇ 114 ವೆಚ್ಚ-5, 2006 ದಿನಾಂಕ: 25.02.2006ರಲ್ಲಿ ನೀಡಿದ ಸಹಮತಿ ಮೇರೆಗೆ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್. ವಿಶಾಲಾಕ್ಷಮ್ಮ**

ಪಿ.ಆರ್.443 ಸರ್ಕಾರದ ಅಧೀನ ಕಾರ್ಯದರ್ಶಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ).

**ವಿಷಯ :** ಶ್ರೀರಂಗಪಟ್ಟಣ ಟೌನಿನ ಪರಂಪರಾ ನಿರ್ವಹಣಾ ಯೋಜನೆ, ಸಂಬಂಧ ಧಾರಣ ಶಕ್ತಿಯುಳ್ಳ ಅಭಿವೃದ್ಧಿ ಹಾಗೂ ಪರಂಪರಾ ನಿರ್ವಹಣಾ ಯೋಜನೆ ತಯಾರಿಸುವ ಕುರಿತು.

**ಓದಲಾಗಿದೆ:** (1) ನಿರ್ದೇಶಕರು, ಸಸ್‌ಟೈನ್‌ನಬಲ್ ಅರ್‌ಬನಿಸಂ ಇಂಟರ್‌ನ್ಯಾಷನಲ್ ರವರ ಪತ್ರ ಸಂಖ್ಯೆ: ದಿನಾಂಕ: 23.09.2005.

(2) ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ರವರ ಪತ್ರ ಸಂಖ್ಯೆ: ಪ್ರಾಸಂಪ/ ತಾ.ಸ./ ಶ್ರೀ ಪಟ್ಟಣ/ 2005-06, ದಿನಾಂಕ: 27.02.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಪತ್ರದಲ್ಲಿ ನಿರ್ದೇಶಕರು, ಸಸ್‌ಟೈನ್‌ನಬಲ್ ಅರ್‌ಬನಿಸಂ ಇಂಟರ್‌ನ್ಯಾಷನಲ್ ರವರು ಶ್ರೀರಂಗಪಟ್ಟಣವು ಐತಿಹಾಸಿಕವಾಗಿ ಪ್ರಸಿದ್ಧಿಯಾಗಿದ್ದು, ಶ್ರೀರಂಗಪಟ್ಟಣವು ಗಮನಾರ್ಹವಾದ ಐತಿಹಾಸಿಕ ಪರಂಪಾರಿಕ ಕಟ್ಟಡಗಳನ್ನು ಒಳಗೊಂಡಿದ್ದು, ಈ ಪಾರಂಪರಿಕ ಕಟ್ಟಡಗಳ ಸಂರಕ್ಷಣೆ ಮತ್ತು ನಿರ್ವಹಣೆಗೆ ಸೂಕ್ತ ನಿರ್ದೇಶನವಿಲ್ಲದ ಕಾರಣ ಪ್ರವಾಸೋದ್ಯಮ ಮತ್ತು ಆರ್ಥಿಕ ಪ್ರಗತಿ ಹೊಂದುವ ಸಾಧ್ಯತೆ ಕಳೆದುಕೊಳ್ಳುತ್ತಿರುವುದರಿಂದ ಶ್ರೀರಂಗಪಟ್ಟಣದಲ್ಲಿರುವ ಪಾರಂಪಾರಿಕ ಕಟ್ಟಡಗಳ ಸಂರಕ್ಷಣೆ ಮತ್ತು ಆರ್ಥಿಕ ಪ್ರಗತಿಗೆ ಸಂಬಂಧಿಸಿದಂತೆ ಯೋಜನೆಗಳನ್ನು ರೂಪಿಸಲು ಸದರಿ ಸಂಸ್ಥೆಯು ಆಸಕ್ತಿ ವಹಿಸಿದ್ದು, ಈ ಯೋಜನೆಯ ಮುಖ್ಯ ಉದ್ದೇಶಗಳು ಐತಿಹಾಸಿಕ ಶ್ರೀರಂಗಪಟ್ಟಣದ ಪಾರಂಪರಿಕ ಕಟ್ಟಡಗಳ ಸಂರಕ್ಷಣೆಗೆ ಅನುಕೂಲವಾಗುವಂತೆ ಪ್ರಸ್ತುತ ಇರುವ ಸಾಮಾಜಿಕ ಆರ್ಥಿಕ ಪರಿಸ್ಥಿತಿ, ಭೂ ಉಪಯೋಗ, ಸಾರಿಗೆ ವ್ಯವಸ್ಥೆ, ಪರಿಸರ ಇವುಗಳನ್ನು ಗುರ್ತಿಸಿ ಪಾರಂಪರಿಕ ಕಟ್ಟಡಗಳ ಸಂರಕ್ಷಣೆಗಳ ಹಾಗೂ ಅಭಿವೃದ್ಧಿಗಾಗಿ ಯೋಜನೆ ನಿರೂಪಿಸಿ ವರದಿ ಸಲ್ಲಿಸುವುದಾಗಿಯೂ, ಈ ಯೋಜನೆಗಾಗಿ ರೂ.4,16,000-00 ವೆಚ್ಚವಾಗುವುದೆಂದು ಈ ವೆಚ್ಚದಲ್ಲಿ ಯೋಜನೆಯನ್ನು ಪ್ರಾರಂಭಿಸುವ ಪೂರ್ವಾರ್ಧದಲ್ಲಿ ಶೇ.50ರ ಮೊತ್ತವನ್ನು ಮುಂಗಡವಾಗಿ ಪಾವತಿಸಬೇಕೆಂದು, ಉಳಿದ ಮೊತ್ತವನ್ನು ಯೋಜನೆಗೆ ಸಂಬಂಧಿಸಿದ ಎರಡು ವರದಿಗಳನ್ನು ಸಲ್ಲಿಸಿದ ನಂತರ ಪಾವತಿಸಬೇಕೆಂದು ಕೋರಿರುತ್ತಾರೆ.

ಮೇಲೆ ಓದಲಾದ ಆಯುಕ್ತರು, ಪ್ರಾಚ್ಯವಸ್ತು ಸಂಗ್ರಹಾಲಯ ಮತ್ತು ಪರಂಪರೆ ಇಲಾಖೆ ರವರ ಪತ್ರದಲ್ಲಿ ನಿರ್ದೇಶಕರು, ಸಸ್‌ಟೈನ್‌ನಬಲ್ ಅರ್‌ಬನಿಸಂ ಇಂಟರ್‌ನ್ಯಾಷನಲ್ ರವರು ಶ್ರೀರಂಗಪಟ್ಟಣ ಟೌನಿನ ಧಾರಣಾ ಶಕ್ತಿಯುಳ್ಳ ಅಭಿವೃದ್ಧಿ ಹಾಗೂ ಪರಂಪರಾ ನಿರ್ವಹಣಾ ಯೋಜನೆ ತಯಾರಿಸುವ ಬಗ್ಗೆ ಹೊಂದಿರುವ ಧ್ಯೇಯೋದ್ದೇಶಗಳು ಸಮರ್ಪಕವಾಗಿರುವುದರಿಂದ ಈ ಬಗ್ಗೆ ಯೋಜನೆ ತಯಾರಿಸಲು ಯೋಜನಾ ವೆಚ್ಚವನ್ನು ಸದರಿ ಸಂಸ್ಥೆಯ ಅಧಿಕಾರಿಗಳೊಂದಿಗೆ ಚರ್ಚಿಸಲಾಗಿರುವಂತೆ ರೂ. 4,16,000-00ಕ್ಕೆ ಬದಲಾಗಿ ರೂ.4-00 ಲಕ್ಷಗಳನ್ನು ಬಿಡುಗಡೆ ಮಾಡಲು ಸರ್ಕಾರದ ಮಂಜೂರಾತಿ ಆದೇಶ ಕೋರಿರುತ್ತಾರೆ.

**ಸರ್ಕಾರಿ ಆದೇಶ ಸಂಖ್ಯೆ: ಸಂಕಇ 251 ಕೆಎಂಯು 2005, ಬೆಂಗಳೂರು, ದಿನಾಂಕ: 22ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಹಿನ್ನೆಲೆಯಲ್ಲಿ ಶ್ರೀರಂಗಪಟ್ಟಣ ನಗರದ ಪರಂಪರಾ ನಿರ್ವಹಣಾ ಯೋಜನೆ ಸಂಬಂಧ ಶ್ರೀರಂಗಪಟ್ಟಣ ಹಾಗೂ ಆ ಪ್ರದೇಶದಲ್ಲಿ ಗುರುತಿಸಲಾಗಿರುವ ಪಾರಂಪರಿಕ ಪ್ರದೇಶಗಳಲ್ಲಿ ಚಾಲ್ತಿಯಲ್ಲಿರುವ ಸಾಮಾಜಿಕ, ಆರ್ಥಿಕ, ಸಾರಿಗೆ ಹಾಗೂ ಅಭಿವೃದ್ಧಿ ನಮೂನೆ/ ಮಾದರಿಗಳನ್ನು ವರದಿ ಮಾಡಿ ದಾಖಲಿಸುವುದು ಮತ್ತು ಶ್ರೀರಂಗಪಟ್ಟಣದ ಪ್ರಸ್ತಾವಿತ ಸಂರಕ್ಷಣೆ ಹಾಗೂ ಪುನರ್ ಅಭಿವೃದ್ಧಿ ಕುರಿತು ಧಾರಣಶಕ್ತಿಯುಳ್ಳ ಅಭಿವೃದ್ಧಿ ಹಾಗೂ ಪರಂಪರಾ ನಿರ್ವಹಣಾ ಮಾದರಿಗಳನ್ನು ತಯಾರಿಸಲು ಡಾ: ಜ್ಯೋತಿ ಹೊಸಗ್ರಹಾರ, ನಿರ್ದೇಶಕರು, ಸಸ್ಟೈನಬಲ್ ಅರ್ಬನಿಸಮ್ ಇಂಟರ್ ನ್ಯಾಷನಲ್ (Sustainable Urbanism International) ಬೆಂಗಳೂರು ರವರಿಗೆ ರೂ.4 ಲಕ್ಷದ (ರೂ.ನಾಲ್ಕು ಲಕ್ಷ ಮಾತ್ರ) ವೆಚ್ಚದಲ್ಲಿ ಯೋಜನೆ ಕೈಗೆತ್ತಿಕೊಳ್ಳಲು ಅನುದಾನ ಬಿಡುಗಡೆ ಮಾಡಲಾಗಿದೆ. ಈ ಯೋಜನೆಯ ಧ್ಯೇಯೋದ್ದೇಶ ಹಾಗೂ ನೀಡಬೇಕಾದ ವರದಿಗಳ ವಿವರಗಳನ್ನು ಅನುಬಂಧ 1 ರಲ್ಲಿ ನೀಡಲಾಗಿದೆ. ಈ ಯೋಜನೆಯನ್ನು ಕೆಳಗಿನ ಷರತ್ತಿಗೊಳಗೊಂಡು ಅನುಮೋದಿಸಲಾಗಿದೆ.

1. ಪ್ರಸಕ್ತ ಆರ್ಥಿಕ ಸಾಲಿನ ಅನುದಾನದಲ್ಲಿ ಈ ವೆಚ್ಚವನ್ನು ಉಪಯೋಗಿಸಿಕೊಳ್ಳುವುದು ಹಾಗೂ ಮುಂಗಡವಾಗಿ ರೂ.2-00 ಲಕ್ಷಗಳನ್ನು ಮಾತ್ರ ಸದರಿ ಸಂಸ್ಥೆಗೆ ಪಾವತಿಸಿ ಉಳಿದ ರೂ.2-00 ಲಕ್ಷಗಳನ್ನು ಸಂಸ್ಥೆಯವರು ಸರ್ಕಾರಕ್ಕೆ ವರದಿ ಸಲ್ಲಿಸಿದ ನಂತರ ಸರ್ಕಾರದ ಅನುಮೋದನೆ ಪಡೆದು ಪಾವತಿಸತಕ್ಕದ್ದು.
2. ಈ ಅಧ್ಯಯನವನ್ನು ಮೂರು ತಿಂಗಳಲ್ಲಿ ಪೂರ್ಣಗೊಳಿಸುವುದು.
3. ಸರ್ಕಾರ ಯಾವ ಉದ್ದೇಶಕ್ಕಾಗಿ ಹಣ ಮಂಜೂರು ಮಾಡಿದೆಯೋ ಅದೇ ಉದ್ದೇಶಕ್ಕೆ ಬಳಸುವುದು.
4. ಸರ್ಕಾರ ಮಂಜೂರು ಮಾಡಿದ ಹಣಕ್ಕೆ ಲೆಕ್ಕ ಪರಿಶೋಧಕರಿಂದ ದೃಢೀಕರಿಸಿದ ಲೆಕ್ಕ ಪಟ್ಟಿ ಹಾಗೂ ಹಣಬಳಕೆ ಪ್ರಮಾಣ ಪತ್ರ ಸಲ್ಲಿಸುವುದು.
5. ಕಾರ್ಯಕ್ರಮ ನಡೆದ ಬಗ್ಗೆ ಸರ್ಕಾರಕ್ಕೆ ವರದಿ ಸಲ್ಲಿಸುವುದು.

ಈ ವೆಚ್ಚವನ್ನು ಲೆಕ್ಕಶೀರ್ಷಿಕೆ 2205-00-103-0-21 (ಯೋಜನೆ) 059 ಇತರೆ ಖರ್ಚು ಅಡಿಯಲ್ಲಿ ಭರಿಸತಕ್ಕದ್ದು.

ಈ ಆದೇಶವನ್ನು ಸರ್ಕಾರಿ ಆದೇಶ ಸಂಖ್ಯೆ: ಎಫ್‌ಡಿ 9 ಪಿಸಿಎಲ್ 2001 (iii) ಬೆಂಗಳೂರು, ದಿನಾಂಕ: 06.08.2005ರಂತೆ ಹಾಗೂ ಆರ್ಥಿಕ ಇಲಾಖೆಯ ಆದೇಶ ಸಂಖ್ಯೆ: ಎಫ್‌ಡಿ 1 ಟಿಎಫ್‌ಪಿ 96 ದಿನಾಂಕ: 10.07.96ರಲ್ಲಿ ಇಲಾಖಾ ಕಾರ್ಯದರ್ಶಿಯವರಿಗೆ ಪ್ರದತ್ತವಾದ ಅಧಿಕಾರದ ಪ್ರತ್ಯಾಯೋಜನೆಯನ್ವಯ ಹೊರಡಿಸಲಾಗಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಕೆ. ಸಾಂಬಶಿವಂ**

ಪೀಠಾಧಿಕಾರಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ).

## ಅನುಬಂಧ

**ಧ್ಯೇಯೋದ್ದೇಶಗಳು:**

1. ಶ್ರೀರಂಗಪಟ್ಟಣದ ಪರಂಪರಾ ಪ್ರದೇಶದಲ್ಲಿ ಭಾಗೀದಾರರು/ ಪಾಲುದಾರರನ್ನು ಗುರ್ತಿಸುವುದರೊಂದಿಗೆ ಸಂರಕ್ಷಣೆ ಹಾಗೂ ಅಭಿವೃದ್ಧಿ ಕಾರ್ಯಗಳ ಮೇಲೆ ಪರಿಣಾಮ ಬೀರಬಲ್ಲ ಸಾಮಾಜಿಕ, ಆರ್ಥಿಕ, ಭೂ ಉಪಯೋಗ, ಪರಿಸರ ಹಾಗೂ ಸಾರಿಗೆ ನಮೂನೆಗಳನ್ನು (patterns) ಗುರ್ತಿಸಿ ದಾಖಲೀಕರಿಸುವುದು.

2. ಚಾರಿತ್ರಿಕ ಹಾಗೂ ಪಾರಂಪರಿಕ ಹಿನ್ನಲೆಯುಳ್ಳ ಶ್ರೀರಂಗಪಟ್ಟಣಕ್ಕೆ ಧಾರಣಶಕ್ತಿಯುಳ್ಳ ಸಮಗ್ರ ಪರಂಪರಾ ನಿರ್ವಹಣಾ ಕಾರ್ಯವಿಧಾನಗಳನ್ನು ಪ್ರಸ್ತಾವಿಸುವುದು.

**ಉತ್ಪನ್ನ: (products)**

1. ಶ್ರೀರಂಗಪಟ್ಟಣ ಹಾಗೂ ಈ ಪ್ರದೇಶದಲ್ಲಿ ಗುರುತಿಸಲಾಗಿರುವ ಪಾರಂಪರಿಕ ಪ್ರದೇಶಗಳಲ್ಲಿ ಚಾಲ್ತಿಯಲ್ಲಿರುವ ಸಾಮಾಜಿಕ, ಆರ್ಥಿಕ, ಸಾರಿಗೆ ಹಾಗೂ ಅಭಿವೃದ್ಧಿ ನಮೂನೆ/ ಮಾದರಿಗಳನ್ನು ವರದಿ ಮಾಡಿ ದಾಖಲಿಸುವುದು.

2. ಶ್ರೀರಂಗಪಟ್ಟಣದ ಪ್ರಸ್ತಾವಿತ ಸಂರಕ್ಷಣೆ ಹಾಗೂ ಪುನರ್ ಅಭಿವೃದ್ಧಿ ಕುರಿತು ಧಾರಣೆಶಕ್ತಿಯುಳ್ಳ ಅಭಿವೃದ್ಧಿ ಹಾಗೂ ಪರಂಪರಾ ನಿರ್ವಹಣಾ ನಮೂನೆ/ ಮಾದರಿಗಳನ್ನು ವರದಿ ಮಾಡುವುದು.

**ಕೆ. ಸಾಂಬಶಿವಂ**

ಪಿ.ಆರ್.444

ಪೀಠಾಧಿಕಾರಿ,

ಕನ್ನಡ ಮತ್ತು ಸಂಸ್ಕೃತಿ ಇಲಾಖೆ (ಆಡಳಿತ ಕನ್ನಡ).

## ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸಚಿವಾಲಯ

**ವಿಷಯ :** ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರ, ಬೆಂಗಳೂರು ಇದರ ಆಡಳಿತ ಮಂಡಳಿಯನ್ನು ಪುನರ್‌ರಚಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಆಕುಕ 80 ಪಿಟಿಡಿ 2004, ದಿನಾಂಕ: 24.02.2005.

(2) ನಿರ್ದೇಶಕರು ಶ್ರೀಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರ, ಬೆಂಗಳೂರು ಇವರ ಪತ್ರ ಸಂಖ್ಯೆ:ಎಸ್:ಜೆಐಸಿಟಿ:(1)326/ 05-06, ದಿನಾಂಕ: 13.02.2006.

**ಪ್ರಸ್ತಾವನೆ:**

ಮೇಲೆ ಓದಲಾದ (1)ರ ಸರ್ಕಾರದ ಆದೇಶದಲ್ಲಿ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರ, ಬೆಂಗಳೂರು ಇದರ ಆಡಳಿತ ಮಂಡಳಿಯನ್ನು ಪುನರ್ ರಚಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ ಸಂಸ್ಥೆಯ ಬೈಲಾ ಪ್ರಕಾರ ಸಂಸ್ಥೆಯ ಆಡಳಿತ ಮಂಡಳಿಯನ್ನು ಪುನರ್ ರಚಿಸುವಂತೆ ಕೋರಿರುತ್ತಾರೆ. ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯ ಅಸೋಸಿಯೇಷನ್‌ನ 4ನೇ ಕಂಡಿಕೆಯೊಂದಿಗೆ ಓದಲಾದ ಸದರಿ ಸಂಸ್ಥೆಯ ನಿಯಮಾವಳಿ ಮತ್ತು ಪರಿ ನಿಯಮಾವಳಿಯ 5(3)ನೇ ನಿಯಮದಡಿಯಲ್ಲಿ ಸರ್ಕಾರವು ಸದರಿ ಆಡಳಿತ ಮಂಡಳಿಯನ್ನು ಪುನರ್ ರಚಿಸಲು ತೀರ್ಮಾನಿಸಿದೆ. ಆದುದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 49 ಪಿಟಿಡಿ 2006, ಬೆಂಗಳೂರು, ದಿನಾಂಕ: 16ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯ Memorandum of Association ನ 4ನೇ ಕಂಡಿಕೆಯೊಂದಿಗೆ ಓದಲಾದ ಸದರಿ ಸಂಸ್ಥೆಯ ನಿಯಮಾವಳಿ ಮತ್ತು ಪರಿ ನಿಯಮಾವಳಿಯ 5(3)ನೆಯ ನಿಯಮದಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಸರ್ಕಾರವು ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆಯ ಆಡಳಿತ ಮಂಡಳಿಯನ್ನು 3 ವರ್ಷಗಳ ಅವಧಿಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಮತ್ತು ಮುಂದಿನ ಆದೇಶದವರೆಗೆ ಈ ಕೆಳಕಂಡಂತೆ ಪುನರ್ ರಚಿಸಲಾಗಿದೆ.

| | | |
|---|---|---|
| 1. | ಮುಖ್ಯಮಂತ್ರಿಗಳು<br>ಕರ್ನಾಟಕ ಸರ್ಕಾರ. | ಅಧ್ಯಕ್ಷರು |
| 2. | ವೈದ್ಯಕೀಯ ಶಿಕ್ಷಣ ಸಚಿವರು<br>ಕರ್ನಾಟಕ ಸರ್ಕಾರ. | ಸಹ ಅಧ್ಯಕ್ಷರು |
| 3. | ಅಪರ ಮುಖ್ಯ ಕಾರ್ಯದರ್ಶಿ ಮತ್ತು ಸರ್ಕಾರದ ಪ್ರಧಾನ<br>ಕಾರ್ಯದರ್ಶಿ, ಯೋಜನಾ ಇಲಾಖೆ. | ಸದಸ್ಯರು |
| 4. | ಸರ್ಕಾರದ ಪ್ರಧಾನ ಕಾರ್ಯದರ್ಶಿ,<br>ಆರ್ಥಿಕ ಇಲಾಖೆ. | ಸದಸ್ಯರು |
| 5. | ಸರ್ಕಾರದ ಪ್ರಧಾನ ಕಾರ್ಯದರ್ಶಿ, ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ. | ಸದಸ್ಯರು |
| 6. | ಸರ್ಕಾರದ ಕಾರ್ಯದರ್ಶಿ,<br>ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ (ವೈದ್ಯಕೀಯ ಶಿಕ್ಷಣ) | ಸದಸ್ಯರು |
| 7. | ವೈದ್ಯಕೀಯ ಶಿಕ್ಷಣ ನಿರ್ದೇಶಕರು | ಸದಸ್ಯರು |
| 8. | ಉಪಕುಲಪತಿ, ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ<br>ವಿಶ್ವವಿದ್ಯಾಲಯ, ಬೆಂಗಳೂರು. | ಸದಸ್ಯರು |
| 9. | ಡಾ: ಡಿ. ಚಿನ್ನಯ್ಯ<br>ಸಂಸ್ಥಾಪಕ ನಿರ್ದೇಶಕರು ಮತ್ತು ಮಾಜಿ ಪ್ರಾಧ್ಯಾಪಕರು ಮತ್ತು<br>ಹೃದ್ರೋಗ ವಿಭಾಗದ ಮುಖ್ಯಸ್ಥರು, ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆ,<br>ನಂ.61ಎ: 3ನೇ ಮೈನ್, 8ನೇ ಬ್ಲಾಕ್, ಜಯನಗರ, ಬೆಂಗಳೂರು. | ಸದಸ್ಯರು |

10. ಡಾ: ಕೆ. ಪೂರ್ಣೇಶ್ ಸದಸ್ಯರು
ಮಾಜಿ ಪ್ರೊಫೆಸರ್ ಆಫ್ ಸಿ.ಟಿ. ಸರ್ಜರಿ,
ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಸಂಸ್ಥೆ,
ನಂ.21, ಸಿಲ್ವರ್ ರಾಕ್ ಅಪಾರ್ಟ್‌ಮೆಂಟ್,
ವಿ.ಎಂ. ರಸ್ತೆ, ಬೆಂಗಳೂರು-560025.
11. ಡಾ: ಎಸ್. ರಾಮೇಗೌಡ, ಸದಸ್ಯರು
ಮಾಜಿ ಅಧ್ಯಕ್ಷರು, ಎ.ಐ.ಸಿ.ಟಿ.ಇ. ನಂ.55, 29ನೇ ಮುಖ್ಯರಸ್ತೆ,
1ನೇ ಅಡ್ಡರಸ್ತೆ, 1ನೇ ಹಂತ, ಬಿ.ಟಿ.ಎಂ. ಲೇಔಟ್, ಬೆಂಗಳೂರು-560068.
12. ಶ್ರೀ ಅನ್ನದಾನಿ, ವಿಧಾನಸಭಾ ಸದಸ್ಯರು, ಮಳವಳ್ಳಿ ಕ್ಷೇತ್ರ. ಸದಸ್ಯರು
13. ಶ್ರೀ ಎ.ಸಿ. ಷಡಾಕ್ಷರಿ, ಶ್ರೀ ಜಯದೇವ ಟ್ರಸ್ಟ್, ಸದಸ್ಯರು
ನಂ.77, ಸರ್ವೆಯರ್ ಸ್ಟ್ರೀಟ್, ಬಸವನಗುಡಿ, ಬೆಂಗಳೂರು-560004.
14. ನಿರ್ದೇಶಕರು, ಶ್ರೀ ಜಯದೇವ ಹೃದ್ರೋಗ ಚಿಕಿತ್ಸಾ ಕೇಂದ್ರ, ಬೆಂಗಳೂರು. ಸದಸ್ಯ ಕಾರ್ಯದರ್ಶಿ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,

**ಎಸ್.ಎನ್. ಕೃಷ್ಣಕುಮಾರ್**

ಪಿ.ಆರ್.445

ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

**ವಿಷಯ :** ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆ, ಬೆಂಗಳೂರು ಇದರ ಆಡಳಿತ ಮಂಡಳಿಯನ್ನು ಪುನರ್‌ರಚಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಆಕುಕ 41 ಪಿಟಿಡಿ 2000, ದಿನಾಂಕ: 17.05.2000.
(2) ಸರ್ಕಾರದ ಆದೇಶ ಸಂಖ್ಯೆ: ಆಕುಕ 248 ಪಿಟಿಡಿ 2001, ದಿನಾಂಕ: 02.11.2001.
(3) ನಿರ್ದೇಶಕರು, ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆ, ಬೆಂಗಳೂರು ಇವರ ಪತ್ರ ದಿನಾಂಕ: 08.09.2005.

**ಪ್ರಸ್ತಾವನೆ:**

ಮೇಲೆ (1)ರಲ್ಲಿ ಓದಲಾದ ಸರ್ಕಾರಿ ಆದೇಶದಲ್ಲಿ ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆ, ಬೆಂಗಳೂರು ಇದರ ಆಡಳಿತ ಮಂಡಳಿಯನ್ನು ಪುನರ್ ರಚಿಸಲಾಗಿದೆ.

ಮೇಲೆ (2)ರಲ್ಲಿ ಓದಲಾದ ಸರ್ಕಾರದ ಆದೇಶದಲ್ಲಿ ಕಿದ್ವಾಯಿ ಸಂಸ್ಥೆಯ ಆಡಳಿತ ಮಂಡಳಿಗೆ ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರನ್ನು ಅಧ್ಯಕ್ಷರನ್ನಾಗಿ ನೇಮಕ ಮಾಡಲಾಗಿದೆ.

ಮೇಲೆ (3)ರಲ್ಲಿ ಓದಲಾದ ನಿರ್ದೇಶಕರ ಪತ್ರದಲ್ಲಿ ಸಂಸ್ಥೆಯ ಆಡಳಿತ ಮಂಡಳಿಯನ್ನು ಪುನರ್ ರಚಿಸಿ ಈಗಾಗಲೇ ಮೂರು ವರ್ಷಗಳ ಅವಧಿಯು ಮುಗಿದಿರುವುದರಿಂದ ಸದರಿ ಆಡಳಿತ ಮಂಡಳಿಯನ್ನು ಪುನರ್ ರಚಿಸುವಂತೆ ಕೋರಿರುತ್ತಾರೆ. ಸದರಿ ಪ್ರಸ್ತಾವನೆಯನ್ನು ಸರ್ಕಾರವು ಪರಿಶೀಲಿಸಿದೆ. ಆದ್ದರಿಂದ ಈ ಆದೇಶ.

**ಸರ್ಕಾರದ ಆದೇಶ ಸಂಖ್ಯೆ: ಆಕುಕ 383 ಪಿಟಿಡಿ 2004, ಬೆಂಗಳೂರು, ದಿನಾಂಕ: 13ನೇ ಮಾರ್ಚ್, 2006**

ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳಿಂದ ಕಿದ್ವಾಯಿ ಸ್ಮಾರಕ ಗ್ರಂಥಿ ಸಂಸ್ಥೆ, ಬೆಂಗಳೂರು ಇದರ ಆಡಳಿತ ಮಂಡಳಿ ಸಮಿತಿಯನ್ನು ಮೂರು ವರ್ಷಗಳ ಅವಧಿಗೆ ಈ ತಕ್ಷಣದಿಂದ ಜಾರಿಗೆ ಬರುವಂತೆ ಈ ಕೆಳಕಂಡಂತೆ ಪುನರ್ ರಚಿಸಿದೆ.

1. ಮಾನ್ಯ ವೈದ್ಯಕೀಯ ಶಿಕ್ಷಣ ಸಚಿವರು ಅಧ್ಯಕ್ಷರು
2. ಸರ್ಕಾರದ ಕಾರ್ಯದರ್ಶಿಗಳು (ವೈದ್ಯಕೀಯ ಶಿಕ್ಷಣ) ಉಪಾಧ್ಯಕ್ಷರು
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
3. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸದಸ್ಯರು
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.
4. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು, ಸದಸ್ಯರು
(ಆರ್ಥಿಕ ಇಲಾಖೆ)
5. ಸರ್ಕಾರದ ಕಾರ್ಯದರ್ಶಿಗಳು, ವಿಜ್ಞಾನ ಮತ್ತು ಮಾಹಿತಿ ತಂತ್ರಜ್ಞಾನ ಇಲಾಖೆ. ಸದಸ್ಯರು
6. ಉಪಕುಲಪತಿಗಳು, ಸದಸ್ಯರು
ರಾಜೀವ್‌ಗಾಂಧಿ ಆರೋಗ್ಯ ವಿಜ್ಞಾನಗಳ ವಿಶ್ವವಿದ್ಯಾಲಯ, ಬೆಂಗಳೂರು.
7. ನಿರ್ದೇಶಕರು, ಸದಸ್ಯರು
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಸೇವೆಗಳು, ಬೆಂಗಳೂರು.
8. ನಿರ್ದೇಶಕರು, ಸದಸ್ಯರು
ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಬೆಂಗಳೂರು.

9. ಜಂಟಿ ಕಾರ್ಯದರ್ಶಿ, ಸದಸ್ಯರು
(ಎನ್.ಸಿ.ಡಿ.) ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ,
ನಿರ್ಮಾಣ ಭವನ, ಭಾರತ ಸರ್ಕಾರ, ನವದೆಹಲಿ.
10. ಡೈರೆಕ್ಟರ್ ಜನರಲ್ ಸದಸ್ಯರು
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ, ಭಾರತ ಸರ್ಕಾರ,
ನಿರ್ಮಾಣ ಭವನ, ನವದೆಹಲಿ.
11. ಡೈರೆಕ್ಟರ್ ಜನರಲ್ ಸದಸ್ಯರು
ಭಾರತೀಯ ವೈದ್ಯಕೀಯ, ಸಂಶೋಧನಾ ಮಂಡಳಿ, ಅನಸಾರಿ ನಗರ, ನವದೆಹಲಿ.
12. ಮುಖ್ಯ ನಿರ್ವಾಹಕರು ಸದಸ್ಯರು
ವಿಕಿರಣ ಮತ್ತು ಸಮತಾ ತಂತ್ರಜ್ಞಾನ, ವಿ.ಎಸ್. ಪುರವ
ಮಾರ್ಗ: ಡೋನಾರ್, ಮುಂಬಯಿ.
13. ಅಧ್ಯಕ್ಷರು ಸದಸ್ಯರು
ಧರ್ಮಶಾಲಾ ಕಮಿಟಿ, ಕಿದ್ವಾಯಿ ಸಂಸ್ಥೆ, ಬೆಂಗಳೂರು.
14. ಅಧ್ಯಕ್ಷರು, ಸಂದರ್ಶಕರ ಮಂಡಳಿ, ಕಿದ್ವಾಯಿ ಸಂಸ್ಥೆ, ಬೆಂಗಳೂರು. ಸದಸ್ಯರು
15. ಮೆಡಿಕಲ್ ಸೂಪರಿಂಟೆಂಡೆಂಟ್ ಸದಸ್ಯರು
ಕಿದ್ವಾಯಿ, ಬೆಂಗಳೂರು.
16. ಶ್ರೀ ಪುಟ್ಟಣ್ಣ ಸದಸ್ಯರು
ವಿಜ್ಞಾನ ಪರಿಷತ್ ಸದಸ್ಯರು, ಕರ್ನಾಟಕ ವಿಧಾನ ಪರಿಷತ್.
17. ನಿರ್ದೇಶಕರು, ಸದಸ್ಯ ಕಾರ್ಯದರ್ಶಿ
ಕಿದ್ವಾಯಿ ಸಂಸ್ಥೆ, ಬೆಂಗಳೂರು.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಎಸ್.ಎನ್. ಕೃಷ್ಣಕುಮಾರ್**
ಪಿ.ಆರ್.446 ಸರ್ಕಾರದ ಅಧೀನ ಕಾರ್ಯದರ್ಶಿ,
ಆರೋಗ್ಯ ಮತ್ತು ಕುಟುಂಬ ಕಲ್ಯಾಣ ಇಲಾಖೆ.

## ಕಂದಾಯ ಸಚಿವಾಲಯ

**ವಿಷಯ :** ಮಂಗಳೂರು ತಾಲ್ಲೂಕು, ಶರವು ಶ್ರೀ ಮಹಾಗಣಪತಿ ದೇವಸ್ಥಾನವನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸುವ ಬಗ್ಗೆ.

**ಓದಲಾಗಿದೆ:** (1) ಸರ್ಕಾರದ ಆದೇಶ ಸಂಖ್ಯೆ: ಕಂಇ 77 ಮುಸೇವಿ 2003, ದಿನಾಂಕ: 30.04.2004.
(2) ಧಾರ್ಮಿಕ ದತ್ತಿ ಆಯುಕ್ತರ ಪತ್ರ ಸಂಖ್ಯೆ: ಏಕರೂಪಶಾಸನ/ ಸಿಆರ್ 69/ 2005-06, ದಿನಾಂಕ: 28.02.2006.

**ಪ್ರಸ್ತಾವನೆ:**

ಮೇಲೆ ಓದಲಾದ ಕ್ರಮ ಸಂಖ್ಯೆ: (1)ರ ಅಧಿಸೂಚನೆಯಲ್ಲಿ ರಾಜ್ಯದಲ್ಲಿನ 34,245 ದೇವಸ್ಥಾನಗಳನ್ನು ಅಧಿಸೂಚಿತ ಸಂಸ್ಥೆಗಳನ್ನಾಗಿ ಪ್ರಕಟಿಸಿರುತ್ತದೆ. ಓದಲಾದ ಕ್ರಮ ಸಂಖ್ಯೆ (2)ರ ಪತ್ರದಲ್ಲಿ ಮಂಗಳೂರು ತಾಲ್ಲೂಕು, ಶರವು ಶ್ರೀ ಮಹಾಗಣಪತಿ ದೇವಸ್ಥಾನವು ಸ್ಥಾಪನೆ ಆದಾಗಿನಿಂದ ವಂಶಪಾರಂಪರ್ಯ ಶಿಲೆಶಿಲೆ ಆಡಳಿತ ಮೊಕ್ತೇಶರರು ಹಾಗೂ ಅರ್ಚಕತನಕ್ಕೆ ಸೇರಿದ ದೇವಸ್ಥಾನವಾಗಿದ್ದು, ದೇವಳದ ಜೀರ್ಣೋದ್ಧಾರ ಕೆಲಸ ಹಾಗೂ ದಿನ ನಿತ್ಯದ ಪೂಜೆ ವಿನಿಯೋಗಾದಿಗಳನ್ನು ಶಿವಳ್ಳಿ ಬ್ರಾಹ್ಮಣ ಪಂಗಡಕ್ಕೆ ಸೇರಿದವರೆ ನೋಡಿಕೊಳ್ಳುತ್ತಿರುವುದರಿಂದ ಈ ದೇವಸ್ಥಾನವನ್ನು ದತ್ತಿಗಳ ಅಧಿನಿಯಮದನ್ವಯ ವಿನಾಯಿತಿಗೊಳಿಸಿ, ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಕೈಬಿಡಲು ಧಾರ್ಮಿಕ ದತ್ತಿ ಆಯುಕ್ತರು ಶಿಫಾರಸ್ಸು ಮಾಡಿದ್ದಾರೆ. ಸದರಿ ಶಿಫಾರಸ್ಸನ್ನು ಸರ್ಕಾರದ ಹಂತದಲ್ಲಿ ಪರಿಶೀಲಿಸಿ, ಈ ಕೆಳಕಂಡಂತೆ ಆದೇಶಿಸಿದೆ.

**ಸರ್ಕಾರದ ಆದೇಶ ಸಂಖ್ಯೆ: ಕಂಇ 29 ಮುಆಬಿ 2006, ಬೆಂಗಳೂರು, ದಿನಾಂಕ: 18ನೇ ಮಾರ್ಚ್, 2006**

ಕರ್ನಾಟಕ ಹಿಂದೂ ಧಾರ್ಮಿಕ ಸಂಸ್ಥೆಗಳು ಮತ್ತು ಧರ್ಮಾದಾಯ ದತ್ತಿಗಳ ಅಧಿನಿಯಮ 1997ರ ಅಧಿನಿಯಮ 1 ಉಪ ನಿಯಮ 4(ii)ರ ಪ್ರಕಾರ ಒಂದು ಹಿಂದೂ ಧಾರ್ಮಿಕ ಪಂಗಡವು ಸ್ಥಾಪಿಸಿರುವ ವ್ಯವಸ್ಥೆಗೊಳಿಸಿರುವ, ನಡೆಸುತ್ತಿರುವ ಅಥವಾ ನಿರ್ವಹಿಸುತ್ತಿರುವ ಯಾವುದೇ ಹಿಂದೂ ಧಾರ್ಮಿಕ ಸಂಸ್ಥೆಗೆ ಅಥವಾ ಧರ್ಮಾದಾಯ ದತ್ತಿಗೆ ಅನ್ವಯಿಸತಕ್ಕದ್ದಲ್ಲ ಎಂದಿರುವುದರಿಂದ ಸರ್ಕಾರದ ಅಧಿಸೂಚನೆ ಸಂಖ್ಯೆ: ಕಂಇ 77 ಮುಸೇವಿ 2003 ದಿನಾಂಕ: 30.04.2003ರಲ್ಲಿ ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಮಂಗಳೂರು ತಾಲ್ಲೂಕು, ಶರವು ಶ್ರೀ ಮಹಾಗಣಪತಿ ದೇವಸ್ಥಾನ ಕ್ರಮ ಸಂಖ್ಯೆ: 23, ಪುಟ ಸಂಖ್ಯೆ: 279ನ್ನು ಅಧಿಸೂಚಿತ ಸಂಸ್ಥೆಗಳ ಪಟ್ಟಿಯಿಂದ ಹೊರತುಪಡಿಸಿ ಆದೇಶಿಸಿದೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಕೆ. ಜಯಚಂದ್ರ**
ಪಿ.ಆರ್.448 ಪೀಠಾಧಿಕಾರಿ,
ಕಂದಾಯ ಇಲಾಖೆ (ಮುಜರಾಯಿ).